# ಕೊಡಗು  ಸಂಗಾತಿ

ಸಂಪಾದಕಿ : ಪಟ್ಟಡ ಶೀಲಾಮಣಿ

ಕನ್ನಡ ಮತ್ತು ಅರೆಭಾಷೆಯ ಏಕೈಕ ಪಾಕ್ಷಿಕ ಪತ್ರಿಕೆ

K.R.N.N. 240 ಸಂಪುಟ : 3 ಸಂಚಿಕೆ : 7 ಏಪ್ರಿಲ್ 1 ರಿಂದ 15, 1999 ಪುಟಗಳು : 24 ರೂ 5.



ಲೇಖನ ಒಳಪುಟಗಳಲ್ಲಿ

ಹಳೆ ತಲೆಮಾರಿನ ಹಿರಿಯ ಸಮಾಜ ಸೇವಾ ಧುರೀಣ ದಿ|| ಕಿರಕಜೆ ನಂಜಪ್ಪ ದೇವಯ್ಯ

ಕೊಡಗು ಸಂಗಾತಿ ತನ್ನ 3ನೇ ವರ್ಷಕ್ಕೆ ಪಾದಾರ್ಪಣೆಗೈಯ್ಯಲು ಸಹಕರಿಸಿದ ಸರ್ವರಿಗೂ ಶುಭಾಶಯಗಳು ಹಾಗೂ ಚಂದದಾರರಿಗೂ, ಜಾಹೀರಾತುದಾರರಿಗೂ ಹೃತ್ಪೂರ್ವಕ ವಂದನೆಗಳು

# ಕೊಡಗು ಸಂಗಾತಿ

ಸಂಪಾದಕಿ, ಪ್ರಕಾಶಕಿ :
**ಪಟ್ಟಡ ಪಿ. ಶೀಲಾಮಣಿ**
ಗೌರವ ಸಂಪಾದಕ :
**ಪಟ್ಟಡ ಎಂ. ಪ್ರಭಾಕರ**
ಮುದ್ರಕರು :
**ಮಚ್ಚಾಂಡ್ರ ಕೆ. ತಮ್ಮಯ್ಯ**

ಚಂದಾ ಕಳುಹಿಸುವ ಮತ್ತು
ಜಾಹೀರಾತು ಪ್ರಸಾರ ಕಛೇರಿ :
**ಕೊಡಗು ಸಂಗಾತಿ**
ನಂ. 35, "ಸವಿತಾ ನಿಲಯ"
1ನೇ ಕ್ರಾಸ್, 4ನೇ ಬ್ಲಾಕ್,
ಡಿವಿಜನಲ್ ಟೆಲಿಕಾಂ ಕಛೇರಿ ಹತ್ತಿರ,
ಜಯಲಕ್ಷ್ಮಿಪುರಂ, ಮೈಸೂರು–12.
ಫೋನ್ : 0821/516771

**–ಸಂಪರ್ಕಿಸುವ ವಿಳಾಸ–**

ಮಣಿ ಸಂಗಾರ್
ಕೊಳ್ಳ ಕಾಂಪ್ಲೆಕ್ಸ್, ಮಂಗಳೂರು ರಸ್ತೆ,
ಚಿಕ್ಕಪೇಟೆ, ಮಡಿಕೇರಿ–571 201
ದೂರವಾಣಿ : 08272/29372

ಬೈತಡ್ಕ ಜಾನಕಿ ಬೆಳ್ಯಪ್ಪ
ನಂ. 21–16 ಎಲ್.ಐ.ಸಿ. ಹತ್ತಿರ
ರೇಸ್ ಕೋರ್ಸ್ ರಸ್ತೆ, ಮಡಿಕೇರಿ
ದೂರವಾಣಿ : 08272/28047

ಕುಂಭಗೌಡನ ಸೋಮಣ್ಣ
ಮಯೂರ ಕೋಲ್ಡ್ ಸ್ಟೋರೇಜ್
ಮುಖ್ಯ ರಸ್ತೆ, ಕುಶಾಲನಗರ–571234

ಅಮ್ಮಾಜೀರ ಪೊನ್ನಪ್ಪ /
ಕಲ್ಲುಮುಟ್ಲು ಬಸಪ್ಪ
20, 1ನೇ ಮೈನ್, 4ನೇ ಕ್ರಾಸ್
ಸಾಕಮ್ಮ ಗಾರ್ಡನ್, ಬಸವನಗುಡಿ,
ಬೆಂಗಳೂರು-04
ದೂರವಾಣಿ–080/6549669


## ಒಳನೋಟ

ಪುಟಗಳು



## ಅರೆ ಭಾಷಿಕ ವಿಭಾಗ



**ಚಂದಾ ವಿವರ**

| | | |
|---|---|---|
| ಬಿಡಿ ಪ್ರತಿ | : | 5 ರೂ. |
| ಅರ್ಧ ವಾರ್ಷಿಕ | : | 60 ರೂ. |
| ವಾರ್ಷಿಕ ಚಂದಾ | : | 120 ರೂ. |

# ಸಂಪಾದಕೀಯ :

## ಸಂಗಾತಿ ನಡೆದು ಬಂದ ದಾರಿ

ಪ್ರಿಯ ಓದುಗರೇ,

ಮೈಸೂರಿನ ಜಯಲಕ್ಷ್ಮಿಪುರಂ ಬಡಾವಣೆಯಲ್ಲಿರುವ ಕೊಡಗು ಗೌಡ ವಿದ್ಯಾರ್ಥಿ ನಿಲಯದಲ್ಲಿ ದಿನಾಂಕ 9-4-97ರ ಯುಗಾದಿಯ ಶುಭ ಮುಹೂರ್ತದಲ್ಲಿ "ಕೊಡಗು ಸಂಗಾತಿ" ಪಾಕ್ಷಿಕ ಪತ್ರಿಕೆಯ ಜನನವಾಯಿತು. ತನ್ನ ಜನಾಂಗದ ಭಾಷೆ, ಸಂಸ್ಕೃತಿ, ಸಂಪ್ರದಾಯ, ಆಚಾರ, ವಿಚಾರಗಳನ್ನು ಹೊರ ಜಗತ್ತಿಗೆ ಪ್ರಚುರಪಡಿಸಲು ಪಣತೊಟ್ಟು ಕಾರ್ಯಪ್ರವೃತ್ತವಾಗಿ ಇಂದಿಗೆ ತನ್ನ ಎರಡನೇ ವರ್ಷವನ್ನು ಪೂರ್ಣಗೊಳಿಸಿ, ಮೂರನೇ ವರ್ಷಕ್ಕೆ ಕಾಲಿಟ್ಟ ಈ ಶುಭ ಗಳಿಗೆಯಲ್ಲಿ ಸಮಸ್ತ ಓದುಗರಿಗೂ, ಹಿತೈಷಿಗಳಿಗೂ, ಚಂದದಾರರಿಗೂ ಹಾಗೂ ನಾಡಿನ ಸರ್ವ ಜನತೆಗೂ ಶುಭ ಹಾರೈಕೆಗಳು.

ತನ್ನ ಜನಾಂಗದ ಸುಮಾರು 150 ಮಂದಿ ಹಿರಿಕಿರಿ ಬರಹಗಾರರನ್ನು ಗುರ್ತಿಸಿದೆ. ಅವರಲ್ಲಿ ನಲ್ವತ್ತಕ್ಕೂ ಮೇಲ್ಪಟ್ಟು ಉತ್ತಮ ಬರಹಗಾರರನ್ನು ಹುಟ್ಟು ಹಾಕಿದೆ ಕಿರಿಯ ಅನನುಭವಿ ಬರಹಗಾರರಿಗೆ ಸಾಹಿತ್ಯಾಭಿರುಚಿ ಹುಟ್ಟುಹಾಕುವುದಕ್ಕೆ ಪುಟ್ಟ ವೇದಿಕೆಯಾಗಿದೆ ಮೂಲತಃ ಗೌಡ ಜನಾಂಗ ನೇಗಿಲಯೋಗಿ, ಕೃಷಿಕರಾದ್ದರಿಂದ ಸಾಹಿತ್ಯದ ಗಂಧವೇ ಇಲ್ಲದಂತಹ ಈ ನಾಡಿನ ಅರೆಭಾಷಿಕ ಜನಾಂಗದಲ್ಲಿ ಇನ್ನು ಅಲ್ಪ ಅವಧಿಯಲ್ಲಿ ಸಾಕಷ್ಟು ಆಸಕ್ತಿ ಮೂಡಿಸುವಲ್ಲಿ ಸಂಗಾತಿ ಯಶಸ್ವಿಯಾಗಿದೆ. ಸುಮಾರು ನಾಲ್ಕೈದು ಲಕ್ಷದಷ್ಟು ಇರುವ ಅರೆಭಾಷಿಕರಿಗೆ ಪಡುಗನ್ನಡದ ಪಳೆಯುಳಿಕೆಯ ಬಳುವಳಿಯಾಗಿ ಬಂದಂತಹ ಈ ಅರೆಭಾಷೆಗೆ ತನ್ನದೇ ಆದ "ಅರೆಭಾಷೆ ಅಕಾಡೆಮಿ" ರಚನೆಗೆ ಈಗ ಸೂಕ್ತ ಸಮಯವಲ್ಲವೇ ? ಯುವಕರು ಹಿರಿಯರಾದಿಯಾಗಿ ಈ ನಿಟ್ಟಿನಲ್ಲಿ ಚಿಂತಿಸಿ ಪ್ರಯತ್ನಿಸುವುದನ್ನು ಸಂಗಾತಿ ಬಯಸಿದೆ.

ಹಿರಿಯರ ಕಿರಿಯರ ಪ್ರತಿಭೆಗಳನ್ನು ಸಾಕಷ್ಟು ಪ್ರಚುರಪಡಿಸಿದೆ. ಜನರು ಪ್ರಚಾರಕ್ಕಾಗಿ ಹಾತೊರೆಯುವುದು ಸಹಜ. ಆದರೆ ಪತ್ರಿಕೆ ಬೆಳೆಯಲು ತಮ್ಮ ಕೊಡುಗೆ ಏನೇನೂ ಸಾಲದು. ಜನರ ಸಹಕಾರ ಪ್ರೋತ್ಸಾಹ ಇಲ್ಲದೆಯೇ ಯಾವ ಪತ್ರಿಕೆಯೂ ಸಹ ಬೆಳೆಯಲಾರದು. ವ್ಯಾಪಾರಿ ಮನೋಭಾವನೆ ಅಲ್ಲದ ಶುದ್ಧ ಜನಾಂಗೀಯ ಪತ್ರಿಕೆಯಾಗಿದೆ. ಕೇವಲ ಬೆರಳೆಣಿಕೆಯಷ್ಟು ಹಿತೈಷಿಗಳಿಂದ ಸಹಕಾರ ಸಿಕ್ಕಿದಂತೂ ನಿಜ. ಜಾಹಿರಾತುಗಳು ಯಾವ ಮೂಲೆಗೂ ಸಾಲದು. ಜಾಹಿರಾತನ್ನು ಹಾಕಿಸಿಕೊಂಡು ಹಣ ಪಾವತಿಸದೆ ವಿಳಂಬಿಸುತ್ತಿರುವವರು ನಮ್ಮಲ್ಲಿಯೂ ಇದ್ದಾರೆ. ಪತ್ರಿಕೆಯನ್ನು ಪ್ರಾರಂಭಿಸಿದಂದಿನಿಂದ ಇಂದಿನತನಕ ಪತ್ರಿಕೆಯನ್ನು ಕಳುಹಿಸುತ್ತಿದ್ದರೂ ಸಹ ಹಲವರು ಇನ್ನು ಚಂದಾ ಹಣ ಕೊಟ್ಟಿರುವುದಿಲ್ಲ ಹೌದು, ಹಲವಾರು ಕುಗ್ರಾಮಗಳಿಗೆ ನಮ್ಮ ಪ್ರತಿನಿಧಿ ಹೋಗಲು ಆಗುತ್ತಿಲ್ಲ. ಸರಿ, ಆದರೆ ಭಾರತ ಸರ್ಕಾರದ ಅಂಚೆ ವ್ಯವಸ್ಥೆಯ ಸದುಪಯೋಗ ಪಡೆದುಕೊಳ್ಳಲು ನಮ್ಮ ಓದುಗರಿಗೆ ಸಾಧ್ಯವಿಲ್ಲವೇ ? ಅಷ್ಟು ಉದಾಸೀನತೆಯೇ ? ಲೋಕದಲ್ಲಿ ಪ್ರತಿಯೊಬ್ಬರು ಒಂದಲ್ಲ ಒಂದು ರೀತಿಯಲ್ಲಿ "ಬಿಝಿ"ಯೇ. ಹಾಗೆಂದು ಮನಿ ಆರ್ಡರ್ ಮೂಲಕ ಹಣ ಕಳುಹಿಸದಿರುವಷ್ಟು ಬೇಜವಾಬ್ದಾರಿಯೇ ? ಕೆಲವರ ಮನೆ ಬಾಗಿಲಿಗೆ ಹಲವು ಬಾರಿ ಭೇಟಿ ಕೊಟ್ಟರು ಬರೀ ರೂಪಾಯಿ 120/ ಪಡೆಯಲು ಇಂದಿಲ್ಲೆ, ಅವು ಇಲ್ಲೆ, ಇನ್ನೊಮ್ಮೆ ಬನ್ನಿ ಅನ್ನುವ ವಾಕ್ಚಾತುರ್ಯ ಬೇರೆ. ಮನೆ ಮನೆಗೆ ವಸೂಲಾತಿಗೆ ಹೋಗಿ ಸಂಗಾತಿಯನ್ನು ಬೆಳೆಸುವುದು ಬಹು ತ್ರಾಸದಾಯಕ ಕೆಲಸ ಹಾಗಾಗಿಯೇ ಡಿಡಿ, ಮನಿಆರ್ಡರ್, ಚೆಕ್‌ಗಳ ವ್ಯವಸ್ಥೆಯನ್ನು ಜಾರಿಗೆ ತಂದಿರುವುದು. ಜನರಿಗೆ ಪತ್ರಿಕೆ ಹೋಗುತ್ತಿದ್ದರೂ ಶೇಕಡ 35 ರಷ್ಟು ಚಂದಾ ನವೀಕರಣಗೊಳ್ಳದಿರುವುದು ನಿಜಕ್ಕೂ ದುಃಖದ ಸಂಗತಿ.

ಸಂಗಾತಿಯು ಈಗ ಬಹಳ ಪುಂಡು ಪುಂಡು ಮಾಡುತ್ತಿದ್ದಾಳೆ. ದುಂದುಗಾರಿಕೆ ಇಲ್ಲದೆ ದಾರಿ ಮುದ್ದೆಯಲ್ಲಿಯೇ ಬೆಳೆದು ಸುಖವಾಗಿದ್ದರು ಸಹ ಅವಳ ಪೋಷಕರಿಗೆ ಅವಳ ಬೆಳವಣಿಗೆಯ ಚಿಂತನೆಯಾಗಿದೆ ಹಾಗೆಂದು ಅವಳೇನು ಕೊರಗಲಿಲ್ಲ ಓದುವ ಬಡ ಮತ್ತು ಮಧ್ಯಮ ವರ್ಗದ ಜನರ ಸಹಕಾರವೇ ಅವಳಿಗೆ ಶ್ರೀರಕ್ಷೆ. ಹಗಲು ರಾತ್ರಿಯೆನ್ನದೆ ದಿನದ 18 ಗಂಟೆಗಳು ಅವಳಿಗಾಗಿ ದುಡಿದು ತಂದುಹಾಕುತ್ತಿದ್ದರೂ ಸಾಲದು. ಕುಚೇಲನ ಜೀವನ ಇವಳದು. ಕೆಸರಿನಲ್ಲಿ ಹುಟ್ಟಿದ ತಾವರೆಯಂತೆ ಬಡವನ ಮನೆಯಲ್ಲಿ ಸಂಗಾತಿ ಹುಟ್ಟಿ ಆಶ್ರಯ ಪಡೆದುದಕ್ಕಿಂತ ಶ್ರೀಮಂತನ ಮಗಳಾಗಿ ಹುಟ್ಟಿದ್ದರೆ ರಾಜ ಮರ್ಯಾದೆ ಸಿಗಬಹುದಿತ್ತೆನ್ನುವ ಕೊರಗು ಪೋಷಕರಿಗೆ.

ಶತ ಶತಮಾನದಿಂದಲೂ ಕೊಡಗಿನಲ್ಲಿ ನೆಲೆ ನಿಂತರೂ ವಲಸೆಗಾರರು ಎಂದು ಇನ್ನು ಕರೆಸಿಕೊಳ್ಳಬೇಕೆ ? ಕೊಡಗಿನ ಮೂಲನಿವಾಸಿಗಳು ಅಂದರೆ ಯಾರು ? ಆದಿ ವಾಸಿಗಳು ಅಂದರೆ ಯಾರು ? ಆದಿ-ಅಂತ್ಯ ಎಂದು ವರ್ಗೀಕರಣ ಮಾಡಿದವರು ಯಾರು ? ಇವರಿಗೆ ಅಧಿಕಾರ ಕೊಟ್ಟವರು ಯಾರು ? ಇವರು ಯಾವ ಮಾನದಂಡದಿಂದ ವರ್ಗೀಕರಣ ಮಾಡಿದ್ದಾರೆ ? ಒಂದು ಹೇಳಿಕೆಯಂತೆ ಕೊಡಗಿನ ಪ್ರಭಲ ವರ್ಗದವರು ವಿದೇಶಿಯ ಕುರ್ದಿಸ್ತಾನದಿಂದ ಬಂದವರಾದರೆ ಉಳಿದ ಜನಾಂಗದವರು ಭಾರತದ ಇತರ ಕಡೆಗಳಿಂದ ಕಾಲಾನು ಕಾಲಕ್ಕೆ ಬಂದು ನೆಲೆ

ನಿಂತವರೇ. ಈ ತಾರತಮ್ಯ ಇನ್ನು ಮುಂದಕ್ಕೆ ನಿಲ್ಲಬೇಕು. ಕೊಡಗಿನಲ್ಲಿ ಹಿರಿಯರ ಹೇಳಿಕೆಯಂತೆ "ಕೆಂಬಟ್ಟಿ" ಜನಾಂಗ ಮಾತ್ರವೇ ಬಹಳ ಹಿಂದೆಯೇ ಇಲ್ಲಿಯ ನಿವಾಸಿಯೆನ್ನುವುದು ವಾಡಿಕೆ. ಇವರು ಇಂದಿನ ಕಲುಷಿತ ಸಮಾಜದಲ್ಲಿ ಗೌಣ್ಯರಾಗಿ ಕಡೆಗಣಿಸಲ್ಪಟ್ಟ ಜನಾಂಗವಾಗಿರುವುದು ನಾಡಿನ ವಿಪರ್ಯಾಸವೇ ಸರಿ. ಅವರು ಸಹ ತಮ್ಮ ಅಸ್ತಿತ್ವವನ್ನು ತೋರಿಸಿಕೊಳ್ಳಬೇಕಿದೆ. ನಾಲ್ಕನೆ ಶತಮಾನದಲ್ಲಿಯೆ ಗಂಗಾಳ್ವಿಕೆಯು ಕೊಡಗಿನ ಹಟ್ಟಿ ಹೊಳೆ ತನಕ ಇತ್ತೆಂಬುದಕ್ಕೆ ಕೊಡಗಿನಲ್ಲಿಯೇ ಸಿಕ್ಕಿದ ಶಿಲಾಶಾಸನಗಳೇ ಆಧಾರ. ಹಾಗೆಂದ ಮೇಲೆ ಅವರ ಆಳ್ವಿಕೆಯಲ್ಲಿ ಗೌಡರು ಇಲ್ಲಿ ಇದ್ದಿರಲೇಬೇಕಲ್ಲವೆ? ಕ್ರಿ ಶ 1300ರ ಸುಮಾರಿಗೆ ಅರೆಭಾಷಿಕರ 6 ಪಾಳೆಗಾರರು ಇದ್ದರೆನ್ನುವ ಅಂಶವನ್ನು "ಪಟ್ಟೋಳೆ ಪಳಮೆ" ರುಜುವಾತು ಪಡಿಸಿದೆ. ಹಾಗಿರುವಾಗ ಅವರು ಎಲ್ಲಿದ್ದಾರೆ? ಏನಾದರು ಎನ್ನುವ ಅಂಶದ ಬಗ್ಗೆ ನಮ್ಮ ಯುವ ಜನಾಂಗ ಅಧ್ಯಯನ, ಸಂಶೋಧನೆ ಮಾಡಬೇಕೆಂಬುದೆ ಸಂಗಾತಿಯ ನಿಲುವು. ಜನಾಂಗದ ಅವಶ್ಯಕತೆಗಳ ಬಗ್ಗೆ ಸಂಪಾದಕೀಯದಲ್ಲಿ ಸಾಕಷ್ಟು ಸಲ ಬರೆದುದಾಗಿದೆ. ಅರೆಭಾಷೆ ಅಕಾಡೆಮಿ, ಪುಸ್ತಕ ಭಂಡಾರ, ಅರೆಭಾಷೆ ನಿಘಂಟು, ಸಂಘಟನೆ ಇತ್ಯಾದಿ ಇನ್ನು ಆಗದಿರುವುದು ನಿಜಕ್ಕೂ ದುಃಖಕರವಾಗಿದೆ.

ಯಾವುದೇ ಕಾರಣಕ್ಕೂ ಕುಲಗುರು ಶ್ರೀ ವೆಂಕಟರಮಣ ಸ್ವಾಮಿಯನ್ನು ವಿದ್ಯಾ ಅದಿದೇವತೆ ತಾಯಿ ಶೃಂಗೇರಿ ಶಾರದಾಂಬೆಯನ್ನು ಅರೆಭಾಷಿಕರಾರು ಮರೆಯಬಾರದು. ಗುರು ಕೃಪೆಯಿಲ್ಲದ ಅರೆಭಾಷಿಕನು ದರ್ಶನ ಮಾಡಿ ಬರುವುದು ಕ್ಷೇಮಕರ. ಅರೆಭಾಷಿಕರಿಗೆ ತಮ್ಮದೇ ಆದ ಪ್ರತ್ಯೇಕ ಗುರುಮಠ ಬೇಕೆನ್ನಿಸುತ್ತಿದೆ. ವೀರಯೋಧರು, ನೇಗಿಲಯೋಗಿಗಳು ಆದ ನಮ್ಮವರ ಹಳೆ ಸಂಪ್ರದಾಯದ ದಟ್ಟಿ ಕುಪ್ಪಸ, ಗೇಂಟೆ ಸೀರೆಗಳು ಹಬ್ಬ ಹರಿದಿನಗಳಲ್ಲಿ ಪ್ರದರ್ಶಿತವಾದರೆ ನೋಡಲು ಚೆಂದ. ಮದುವೆಯೆಂಬ ಶುಭಗಳಿಗೆಯಲ್ಲಾದರು ಬಿಳಿಕೋಟು, ಪಂಚೆ, ಸೆರಗಿನ ಸೀರೆಯ ಉಡುಪನ್ನು ಖಡ್ಡಾಯ ಹಾಕಲೇಬೇಕೆಂಬ ನಿಯಮವನ್ನು ಪುನಃ ಜಾರಿಗೆ ತರಬೇಕು. ಪ್ರದರ್ಶಿಸಲೂ ಹಿಂದೇಟು ಹಾಕುವವರನ್ನು ಜನಾಂಗದವರು ಕಡೆಗಣಿಸಬೇಕು. ದುಬಾರಿ ಮದುವೆಯ ಖರ್ಚು ಅರ್ಥಹೀನ. ಧಾರಾಮಂಟಪದಲ್ಲಿ ಚಪ್ಪಲಿ, ಶೂ ಕಾಲುಗಳಿಂದ "ಸೀತಾವಳಿ ಚಪ್ಪರದ" ಮೇಲ್ಕಟ್ಟಡಿಗೆ ಬರುವ ಕೆಟ್ಟ ದುರಾಹಂಕಾರ ಸಂಪ್ರದಾಯ ಕೂಡಲೇ ನಿಲ್ಲಬೇಕು. ಗೌಡನಾಗಿ ಹುಟ್ಟಿ ಅರೆಭಾಷೆಯನ್ನು ಮಾತನಾಡಲು ಹಿಂಜರಿದರೆ ತನ್ನ ಹೆತ್ತತಾಯಿಯನ್ನೇ ಸಂಶಯಿಸಿದಂತೆ, ಹುಟ್ಟು ಭಾಷೆಯನ್ನು ಮಾತನಾಡಲು ಅಂಜಿಕೆಯೇಕೆ? ಯುವ ಜನಾಂಗವೇ ನಮ್ಮ ವಿಶಿಷ್ಟ ಭಾಷೆ, ಸಂಸ್ಕೃತಿಯನ್ನು ಉಳಿಸಿ ಬೆಳೆಸಿ ಪೋಷಿಸೋಣ.

ಜನಾಂಗದ ಹಲವರು ದೇಶದ ಇತರ ಜನಾಂಗದವರೊಡನೆಯೂ, ವಕ್ಕಲಿಗರೊಡನೆಯೂ ಸಂಬಂಧ ಬೆಳೆಸಿದ ತಕ್ಷಣ ನಾವೆಲ್ಲಾ "ಸೂಪರ್ ಗೌಡ" ಅನ್ನುವ ಭಾವನೆ ಬೆಳೆಸಿಕೊಂಡಿದ್ದಾರೆ. ಹಾಗೆಂದು ಅರೆಭಾಷಿಕರನ್ನು ನಿರ್ಲಕ್ಷತೆಯಿಂದ ಕಾಣುತ್ತಿರುವುದು ನಿಜಕ್ಕೂ ಬ್ಯಾಸರದ ಸಂಗತಿ. ಜಾತಿಯತೆಯ ಅವಶ್ಯಕತೆ ಈಗ ಇಲ್ಲದಿರಬಹುದು. ಹಾಗೆಂದ ಮಾತ್ರಕ್ಕೆ ಗೌಡ ಜನಾಂಗದಲ್ಲಿ ಹುಟ್ಟಿ ಇವರ ಅಭಿವೃದ್ಧಿಗೆ ಶ್ರಮಿಸಬಾರದೆನ್ನುವ ನಿಯಮ ಎಲ್ಲೂ ಇಲ್ಲ ತಾನೇ? ಒಂದು ಜನಾಂಗದ ಅಭಿವೃದ್ಧಿಯೇ ಒಂದು ದೇಶದ ಪ್ರಗತಿಯೆಂದು ನಮಗಿದು ಯಾವತ್ತು ತಿಳಿದಿರಬೇಕು. ಜನಾಂಗದ ಅಭಿವೃದ್ಧಿಯ ಟೀಕೆ ಟಿಪ್ಪಣಿಗಳಿಗೆ ಸದಾ ಸಂಗಾತಿಯ ಬಾಗಿಲು ತೆರೆದಿರುತ್ತದೆ.

ಯುವ ಪೀಳಿಗೆಯವರೇ ನಮ್ಮ ಸಂಪ್ರದಾಯಗಳ ಪದ್ಧತಿ, ಆಚಾರ, ವಿಚಾರ ಕಟ್ಟುಪಾಡುಗಳಲ್ಲಿ ಯಾವುದೇ ಕೀಳರಿಮೆಗೆ ಇದು ಕಾಲವಲ್ಲ ನಮ್ಮ ಕಟ್ಟುಪಾಡುಗಳು ಯಾವುದು ಅನುಕರಣೆ ಆಗಿಲ್ಲ. ತನ್ನದೇ ಆದ ವಿಶಿಷ್ಟ ಶೈಲಿಯಲ್ಲಿಯೇ ಇಲ್ಲಿಯತನಕ ಉಳಿದು ಬಾಳಿ ಬಂದಿರುತ್ತದೆ. ಇದಕ್ಕೆ ಅಳಿಯುವೆಂಬುದೆ ಇರಬಾರದು. ಗೌಡರು ಇನ್ನೊಬ್ಬರ ಸಂಪ್ರದಾಯಗಳಿಗೆ ಎಂದೂ ತಲೆಬಾಗಿಲ್ಲ. ಇದನ್ನೆ 7000 ವರ್ಷದ ಚರಿತ್ರೆ ಹೇಳುತ್ತದೆ. ಅನುಕರಣೆ ಆಗಿದ್ದರೆ ನಮ್ಮ ಮಹಿಳೆಯರ ಸೆರಗಿನ "ನೆರಿ" ಸೊಂಟದ ಹಿಂದೆ ಹೋಗಲೇಬೇಕಿತ್ತಲ್ಲವೆ? ಯಾಕೆ ಹಾಗಾಗಲಿಲ್ಲ? ಕಾರಣ ನಮ್ಮ ಹಿರಿಯರು ನಮ್ಮತನ, ತನ್ನತನದ ಸ್ವಂತಿಕೆಯನ್ನು ಕಾಪಾಡಿಕೊಂಡು ಬಂದಿದ್ದಾರೆ. ಆದ್ದರಿಂದ ಯುವ ಫೀಳಿಗೆಯೇ ನಾವೆಂದೂ ನಮ್ಮ ಸಂಪ್ರದಾಯ ಪದ್ಧತಿಗಳನ್ನು ಶಿರಸಾವಹಿಸಿ ಪಾಲಿಸೋಣ. ನಮಗಿದೇ ಶ್ರೇಷ್ಠ. ಗುರುಕಾರೋಣರ ಆಶೀರ್ವಾದ ಸದಾ ನಮಗಿದೆಯೆಂದು ತಿಳಿಯಿರಿ.

ಸಂಗಾತಿ ಪತ್ರಿಕೆ ಹಲವಾರು ಟೀಕೆ ಟಿಪ್ಪಣಿಗಳಿಗೆ ಜಗ್ಗದೆ ಎದೆಗುಂದದೆ ಇಲ್ಲಿಯ ತನಕ ಮುಂದುವರಿದು ಬಂದಿದೆ. ಅದು ನಿಂತು ಹೋಗುವುದಿಲ್ಲ. ಆದರೆ ಓದುಗರ ಕೃಪಾಕಟಾಕ್ಷ ಸದಾ ಇರಲಿ. ಮೊದಲಿಗೆ ಓದುಗರಾಗಿ, ಸದಸ್ಯರಾಗಿ, ಜಾಹಿರಾತುದಾರರಾಗಿ, ಜೀವಾವಧಿ ಸದಸ್ಯರಾಗಿ ಹಿತೈಷಿಯಾಗಿ ನಿಮ್ಮೆಲ್ಲರ ಸಹಕಾರ ಬಯಸುತ್ತದೆ. ಕೊಡಗು ಸಂಗಾತಿ ಒಂದು ಸಧೃಢ ಸಂಸ್ಥೆಯಾಗಿ ಬೆಳೆಯಬೇಕಲ್ಲದೆ ಸಾಕಷ್ಟು ಸಕಾರ್ಯ ಮಾಡಲು ಉದ್ದೇಶಿಸಿದೆ. ಸಂಗಾತಿ ನಿಮ್ಮ ಮನೆ ಬಾಗಿಲಿಗೆ ಬಂದಾಗ ಸ್ವಾಗತಿಸಿ, ಆದರಿಸಿ, ಕೊಳ್ಳಿರಿ–ಬರೆಯಿರಿ–ಮೆರೆಯಿರಿ.

"ಜೈ ಗೌಡ ಬಾಂಧವರೇ".

# ಹಳೆ ತಲೆಮಾರಿನ ಹಿರಿತನದ ಸಮಾಜ ಸೇವಾಧುರೀಣ : ದಿವಂಗತ ಶಿರಕಜೆ ನಂಜಪ್ಪ ದೇವಯ್ಯ

ದಿವಂಗತ ಶಿರಕಜೆ ನಂಜಪ್ಪ ಮತ್ತು ಸಣ್ಣಕ್ಕನವರ ಪುತ್ರನಾಗಿ 16-11-1902ರಲ್ಲಿ ಭಾಗಮಂಡಲನಾಡು ಚೇರಂಗಾಲ ಗ್ರಾಮದಲ್ಲಿ ಜನಿಸಿದ ಇವರು ತಮ್ಮ ತಂದೆಯವರನ್ನು ತನ್ನ 2ನೇ ವಯಸ್ಸಿನಲ್ಲಿ ಕಳೆದುಕೊಂಡು ತನ್ನ ಅಜ್ಜ ಸಣ್ಣಕ್ಕನವರ ಪೋಷಣೆಯಲ್ಲಿ ಪ್ರಾಥಮಿಕ ಶಾಲಾ ವಿದ್ಯಾಭ್ಯಾಸವನ್ನು ಮಾಡುತ್ತಿದ್ದಾಗಲೇ ತನ್ನ 16ನೇ ವಯಸ್ಸಿನಲ್ಲಿ ಮನೆ ಬಿಟ್ಟು ಕೆಲಸವನ್ನು ಹುಡುಕುತ್ತಾ, ದೇಶ ಪರ್ಯಟನೆ ಮಾಡಿ ಮೊದಲಿಗೆ ಸೆಂಟ್ರಲ್ P.W.D ಯಲ್ಲಿ ರಸ್ತೆ ಇಂಜಿನ್ ಮೆಕಾನಿಕ್ ಆಗಿ ಸೇರಿದರು. ಇವರಿಗೆ ಸ್ವಂತವಾಗಿ ವಿದ್ಯೆಯನ್ನು ಕಲಿಯಲೇಬೇಕೆಂಬ ಛಲದಿಂದ ಇಂಗ್ಲಿಷ್ ಸ್ವಯಂ ಬೋಧಿನಿ ಹಾಗೂ ಕನ್ನಡ ಪುಸ್ತಕಗಳನ್ನು ಓದಿ ತಮ್ಮ ಜ್ಞಾನ ಭಂಡಾರವನ್ನು ಹೆಚ್ಚಿಸಿಕೊಂಡು ತಾಂತ್ರಿಕ ಜ್ಞಾನವನ್ನು ಗಳಿಸಿ ಮೈಸೂರಿನ ರೈಲ್ವೆ ವರ್ಕ್‌ಶಾಪ್‌ನಲ್ಲಿ ಕೆಲಸಕ್ಕೆ ಸೇರಿದರು. ಅಲ್ಲಿ ಕೆಲಸ ಮಾಡಿದುದರಿಂದ ಇವರ ತಾಂತ್ರಿಕ ಜ್ಞಾನ ಹೆಚ್ಚಿದುದಲ್ಲದೆ ಪೂನಾದಲ್ಲೂ ಕೆಲಸ ಮಾಡಿ, ನಂತರ ಮುಂಬೈಗೆ ಹೋಗಿ ಅಲ್ಲಿ ತಾಂತ್ರಿಕ ತರಬೇತಿಯನ್ನು ಪಡೆದು, ಸ್ವಲ್ಪ ಸಮಯ ಇದ್ದು ಸುಮಾರು 1927ನೇ ಇಸವಿಯಲ್ಲಿ ಆಂಗ್ಲೋ ಇರಾನಿಯನ್ ಎಣ್ಣೆ ಕಂಪನಿಯಲ್ಲಿ ಮೆಕಾನಿಕ್ ಆಗಿ ಕೆಲಸಕ್ಕೆ ಸೇರಿ 1941ರ ವರೆಗೆ ಇರಾನಿನಲ್ಲಿ ಉದ್ಯೋಗದಲ್ಲಿದ್ದು ಆಂಗ್ಲರೊಡನಾಡಿ ಶಿಸ್ತು ಮತ್ತು ಕರ್ತವ್ಯನಿಷ್ಠೆಗೆ ಹೆಸರಾದರು.

ಇವರು 1932ರಲ್ಲಿ ಕೂಡಕಂಡಿ ಮನೆತನದ ದಿವಂಗತ ತಮ್ಮಣ್ಣನವರ ಪ್ರಥಮ ಪುತ್ರಿ ಸೀತಮ್ಮನವರನ್ನು ವರಿಸಿ 1941ರ ವರೆಗೆ ಪತ್ನಿಯೊಡನೆ ಪರ್ಷಿಯಾದ ಅಬಾದಾನ್‌ನಲ್ಲಿ ನೆಲೆಸಿದ್ದು ನಂತರ 1942ರಲ್ಲಿ ಭದ್ರಾವತಿಯಲ್ಲಿ ಸ್ಥಾಪಿಸಿರುವ ಕಬ್ಬಿಣ ಕಾರ್ಖಾನೆಯ ಒಂದು ಶಾಖೆಯನ್ನು ಮೈಸೂರಿನಲ್ಲಿ ತೆರೆದಾಗ ದೇವಯ್ಯನವರೇ ಅದರ ಮೇಲ್ವಿಚಾರಣೆಯನ್ನು ನೋಡಿಕೊಂಡು, ಮೈಸೂರಿನಲ್ಲಿದ್ದ ಫೆರೋ ಅಲಾಯಿಸ್ ಕಾರ್ಖಾನೆಯಲ್ಲಿ ಮೆಕಾನಿಕಲ್ ವಿಭಾಗದಲ್ಲಿ ಕೆಲಸ ಮಾಡಿ, 1954ರಲ್ಲಿ ಆ ಕಾರ್ಖಾನೆಯನ್ನು ಭದ್ರಾವತಿಗೆ ವರ್ಗಾಯಿಸಿದಾಗ ಅಲ್ಲಿಗೆ ಹೋಗಿ ಫೆರೋಸಿಲ್ಕನ್ ಕಾರ್ಖಾನೆಯಲ್ಲಿ 1960ರವರೆಗೆ ಸೇವೆ ಸಲ್ಲಿಸಿ ಸೀನಿಯರ್ ಸೂಪರಿಂಟೆಂಡೆಂಟ್ ಆಗಿ ನಿವೃತ್ತಿ ಆದರು. ಇವರು ಸೇವೆ ಸಲ್ಲಿಸುತ್ತಿದ್ದ ಸಮಯದಲ್ಲಿ ಕಾರ್ಖಾನೆಯಲ್ಲಿ ಯಾವುದೇ ತಾಂತ್ರಿಕ ದೋಷವಿದ್ದರೆ ಇವರಿಂದಲೇ ದುರಸ್ತಿ ಮಾಡಿಸುತ್ತಿರುವುದು ತಂತ್ರಜ್ಞಾನವನ್ನು ಹೊಂದಿದ್ದರೆನ್ನುವುದಕ್ಕೆ ಹೆಮ್ಮೆಯೆನಿಸಿದೆ ತದನಂತರ ಇವರು 1961ರಲ್ಲಿ ಬೆಳಗೊಳದ ಮಂಡ್ಯ ನ್ಯಾಷನಲ್ ಪೇಪರ್ ಮಿಲ್ಸ್‌ನಲ್ಲಿ ಸೇವೆ ಸಲ್ಲಿಸಿದರು.

ಅಂದು 1960ರ ಸುಮಾರಿಗೆ ಮೈಸೂರಿನಲ್ಲಿ ಓದುತ್ತಿದ್ದ ಕೊಡಗು ಗೌಡ ವಿದ್ಯಾರ್ಥಿಗಳಿಗೆ ವಿದ್ಯಾರ್ಥಿ ನಿಲಯದ ಅವಶ್ಯಕತೆಯ ಸಮಯದಲ್ಲಿ ಮೈಸೂರಿನ ಶಾಖೆಯ ಕೊಡಗು ಗೌಡ ಸಂಘಕ್ಕೆಂದು ನಿವೇಶನಕ್ಕಾಗಿ ಊರು, ನಾಡೆಲ್ಲಾ ಸುತ್ತಿ, ನಿಧಿ ಸಂಗ್ರಹಿಸುವ ಕಾರ್ಯದಲ್ಲಿ ತೊಡಗಿ ತಮ್ಮ ಇಳಿ ವಯಸ್ಸಿನಲ್ಲಿ ಮನೆ ಮನೆಗಳಿಗೆ ಹೋಗಿ ಹಣ ಸಂಗ್ರಹಿಸಿದ್ದಾರೆ. ತದನಂತರ ಕೆಲವು ಭಿನ್ನಾಭಿಪ್ರಾಯದಿಂದ ವಿಚಲಿತರಾದ ಕೊರಗು ತನ್ನ ಕೊನೆಯುಸಿರಿರುವ ತನಕವಿದ್ದುದು ವಿಪರ್ಯಾಸವೆನ್ನಬೇಕು. ನಿವೇಶನ ಒದಗಿಸಲು ಆಗಿನ ಮೈಸೂರು ಸಿಟಿ ಇಂಪ್ರೂವ್‌ಮೆಂಟ್ ಟ್ರಸ್ಟ್ ಬೋರ್ಡಿನೊಡನೆ ಸಂಪರ್ಕಿಸಿ, ಜಯಲಕ್ಷ್ಮಿಪುರಂನ ನಿವೇಶನವನ್ನು ಪಡೆಯುವಲ್ಲಿ ಯಶಸ್ವಿಯಾಗಿದ್ದಾರೆ. ಶಾಖೆಯ ದ್ವಿತೀಯ ಅಧ್ಯಕ್ಷರಾಗಿ ಸಹ ದುಡಿದು ಸೇವೆ ಸಲ್ಲಿಸಿದ್ದಾರೆ.

ಅಂದಿನ ಕಾರ್ಯಕಾರಿ ಸಮಿತಿಯ ಇತರ ಸದಸ್ಯರಾದ ಬೈಲೋಳಿರ ಕಾರ್ಯಪ್ಪ, ದಿ|| ಕುಜ್ಞಾಳಿರ ಮಾದಪ್ಪ, ಪೊನ್ನಚನ ಚಂಗಪ್ಪ, ನೆಯ್ಯಣ್ಣೀರ ಕುಶಾಲಪ್ಪ ಕಾನಡ್ಕ ಪದ್ಮಾಜಿ ಸಂಪಾಜೆಯ ದೇವಿಪ್ರಸಾದ್, ಕೂಡಕಂಡಿ ಬಸಪ್ಪ, ಅಚ್ಚಿಪಟ್ಟೀರ ಗಣೇಶ್, ಹುದೇರಿ ಸೋಮಣ್ಣ, ಕಳಂಜನ ಸೋಮಯ್ಯ, ಆನೆ ಶಿವರಾಯ್, ಬಿದುರುಪಣೆ ದೇವಯ್ಯ ಹೀಗೆ ಹಲವಾರು ಜನರ ಸಹಕಾರದೊಡನೆ ರಚಿತಗೊಂಡ ಸಮಿತಿ ಇತ್ತಲ್ಲದೆ 'ವಿಜಯ ಪ್ರಭೆ' ಯೆಂಬ ಪುಸ್ತಕವನ್ನು ಹೊರತರುವಲ್ಲಿ ಯಶಸ್ವಿಯಾಗಿದ್ದಾರೆ. ಅಂದಿನ ಇವರೆಲ್ಲರ ಶ್ರಮ ಶ್ಲಾಘನೀಯವಾದುದು. 1962 ರಲ್ಲಿ ಗೌಡ ಸಂಘದ ಶಾಖೆಯ ಸ್ಥಾಪಕಾಧ್ಯಕ್ಷರಾಗಿ ಬೈಲೋಳಿರ ಕಾರ್ಯಪ್ಪನವರ ನಂತರದ ಅವಧಿಯಲ್ಲಿ ಸಿರಕಜೆಯವರು ಅಧ್ಯಕ್ಷರಾಗಿ ಜನಾಂಗಕ್ಕಾಗಿ ಸೇವೆ ಸಲ್ಲಿಸಿದ್ದಾರೆ ಹಾಗೂ ಮೈಸೂರಿನ ಸಿಟಿ ಟ್ರಸ್ಟ್ ಬೋರ್ಡಿನ [ಮುಡಾ] ಉದ್ಯೋಗಿಯಾಗಿದ್ದ ಶ್ರೀ ಲಿಂಗಪ್ಪನವರು ಒಕ್ಕಲಿಗರಾದರು ನಿವೇಶನ ಪಡೆಯುವಲ್ಲಿ ಸಾಕಷ್ಟು ಶ್ರಮಿಸಿದ್ದಾರೆ. ಇವರು ಸಹ ಸ್ಮರಣಾರ್ಹರು. ಯಾರೊಬ್ಬರ ಸಹಾಯವಿಲ್ಲದೆಯೇ ಸ್ವಂತ ವಿದ್ಯಾಭ್ಯಾಸವನ್ನು ಮಾಡಿದ ಶಿರಕಜೆಯವರು ತಮ್ಮ ನಾಲ್ಕು ಮಕ್ಕಳನ್ನು ಪದವೀಧರನ್ನಾಗಿ ಮಾಡಿ ತನ್ನ ಛಲವನ್ನು ಸಾಧಿಸಿ ಇತರರಿಗೆ ಒಬ್ಬ ಮಾರ್ಗದರ್ಶಿಯಾಗಿ ಕೀರ್ತಿಶೇಷರಾಗಿದ್ದಾರೆ. ಇವರ ಮಗಳು ಭಾಗೀರಥಿಯವರು ಎಂ.ಎ ಸ್ನಾತಕೋತ್ತರ ಪದವಿ ಪಡೆದು ಕೇಂದ್ರಿಯ ಕಾರ್ಮಿಕ ಶಿಕ್ಷಣ ನಿಗಮದಲ್ಲಿ ರೀಜನಲ್ ಡೈರೆಕ್ಟರಾಗಿ ನಿವೃತ್ತಿಯಾಗಿದ್ದಾರೆ.

[ 12 ನೇ ಪುಟಕ್ಕೆ ಮುಂದುವರೆದಿದೆ ]

# ಆರೋಗ್ಯದ ದೃಷ್ಟಿಯಲ್ಲಿ ದೇವಸ್ಥಾನಗಳ ಮಹತ್ವ

ದೇವಸ್ಥಾನಗಳಿಗೆ ಹೋಗಿ, ದೇವರ ದರ್ಶನ ಮಾಡುವುದು ಅನಾದಿ ಕಾಲದಿಂದಲೂ ನಮ್ಮಲ್ಲಿ ನಡೆದುಕೊಂಡು ಬಂದಿರುವ ಪದ್ಧತಿ. ದೇವರ ಮೇಲಿನ ಭಯ ಭಕ್ತಿಯೇ ಇದಕ್ಕೆ ಕಾರಣ ಎಂಬಹುದು.

ಪ್ರದಕ್ಷಿಣೆ, ನಮಸ್ಕಾರ, ತಪ್ಪೊಪ್ಪಿಗೆ, ಪೂಜೆ, ಆರತಿ, ತೀರ್ಥ ಪ್ರಸಾದ ಇವುಗಳನ್ನೆಲ್ಲಾ ಸೂಕ್ಷ್ಮವಾಗಿ ಪರಿಶೀಲಿಸಿದರೆ, ಇವುಗಳೊಳಗೆ ಹುದುಗಿರುವ ಮೂಲ ಉದ್ದೇಶ [ಮಹತ್ವ] ಅರಿವಾಗುವುದು. ಬಹಳ ಹಿಂದೆಯೇ ನಮ್ಮ ಪೂರ್ವಿಕರು ಈ

ಬಿಟ್ಟೀರ ಚೋಂದಮ್ಮ ಶಂಭು, ಬೆಂಗಳೂರು

ವಿಚಾರಗಳನ್ನು ಮನಗಂಡೇ ದೇವಸ್ಥಾನಕ್ಕೆ ಹೋಗುವ ವಿಧಿಯನ್ನು ಆಚರಣೆಯಲ್ಲಿ ತಂದಿರಬೇಕು ಎನ್ನಿಸುತ್ತದೆ. ವಾಕಿಂಗ್ ಹೋಗಿ, ಬಸ್ಕಿ ಹೊಡೆಯಿರಿ ಎಂದೇನಾದರೂ ವಿಧಿಸಿದ್ದರೆ ಯಾರು ಮಾಡುತ್ತಿರಲಿಲ್ಲ. ಅದಕ್ಕಾಗಿ ದೇವರ ಭಯ ಹುಟ್ಟಿಸಿ, ಭಕ್ತಿ ಉಂಟಾಗುವಂತೆ ಮಾಡಿ, ಖಡ್ಡಾಯವಾಗಿ ದೇವಸ್ಥಾನಕ್ಕೆ ಹೋಗಬೇಕೆಂದು ವಿಧಿಸಿರಬಹುದು. ಆದರೆ ನಮ್ಮಲ್ಲಿ ಎಷ್ಟು ಜನರು ಈ ನಿಯಮವನ್ನು ಪಾಲಿಸುತ್ತಾರೋ ಹೇಳಲಾಗದು.

**ಪ್ರದಕ್ಷಿಣೆ :**

ದೇವಸ್ಥಾನಕ್ಕೆ ಹೋಗಿ ಪ್ರದಕ್ಷಿಣೆ ಹಾಕಿದಾಗ ದೇವಸ್ಥಾನದ ಪ್ರಾಂಗಣದಲ್ಲಿ ಹಾಕಿದ ಒರಟು ಹಾಸುಕಲ್ಲುಗಳು [ಈಗಿನ ಆಡಂಬರದ ದೇವಸ್ಥಾನಗಳಲ್ಲಿ ಅಮೃತಶಿಲೆ ಮುಂತಾದ ನಯವಾದ ಕಲ್ಲುಗಳು ಹಾಸಲ್ಪಡುತ್ತಿದೆ.] ಅಥವಾ ವಿರಳತದ ಗುಂಡಿ ಗುಡುಪಿನ ನೆಲವು ನಮ್ಮ ಪಾದತಳದಲ್ಲಿ ಒತ್ತಲ್ಪಡುತ್ತವೆ. ನಮ್ಮ ದೇಹದ ನರಮಂಡಲಗಳ ಕೊನೆಯು ಪಾದಾಗ್ರದಲ್ಲಿ, ಕೈ ಬೆರಳ ತುದಿಯಲ್ಲೂ ಇರುತ್ತವೆ. ಈ ಭಾಗಗಳು ಒತ್ತಲ್ಪಟ್ಟಾಗ ನರಮಂಡಲಗಳು ಚೈತನ್ಯ ಪಡೆಯುತ್ತವೆ [ಈಗಿನ ಆಕ್ಯುಪ್ರೆಶರ್.]

**ನಮಸ್ಕಾರಗಳು :**

ವಿವಿಧ ರೀತಿಯ ನಮಸ್ಕಾರಗಳು ದೇಹಕ್ಕೆ ವ್ಯಾಯಾಮ ವಾಗುತ್ತದೆ. ಸಾಷ್ಟಾಂಗ ನಮಸ್ಕಾರವಂತು ದೇಹದ ಎಲ್ಲಾ ಭಾಗಗಳಿಗೂ ವ್ಯಾಯಾಮ ಮಾಡಿಸುತ್ತದೆ.

**ಆರತಿ :**

ಆರತಿ ಮಾಡಲು ತುಪ್ಪ, ಕರ್ಪೂರ ಉಪಯೋಗಿಸುತ್ತಾರೆ. ಇವುಗಳನ್ನು ಉರಿಸಿದಾಗ ಫಾರ್ಮಾಲ್ ಡಿ ಹೈಡ್ ಉತ್ಪತ್ತಿಯಾಗಿ ರೋಗಾಣುಗಳನ್ನು ನಾಶಪಡಿಸುತ್ತದೆ.

**ತೀರ್ಥ :** ತೀರ್ಥದಲ್ಲಿ ಶ್ರೀಗಂಧ, ತುಳಸಿ, ಪಚ್ಚೆಕರ್ಪೂರ, ಕೇಸರಿ ಮುಂತಾದವನ್ನು ಬಳಸುವುದರಿಂದ ಇವುಗಳು ನೀರಿನಲ್ಲಿ ಕರಗಿ, ಪಿತ್ತ, ಕಫ ನಿವಾರಿಸುವುದಲ್ಲದೆ ಒಂದೊಂದು ವಸ್ತುವೂ ರೋಗ ನಿರೋಧಕ ಗುಣವನ್ನು ಹೊಂದಿರುವುದು. ಇವುಗಳಿಂದ ಹೊರಸೂಸುವ ಸುವಾಸನೆಯೂ ಕೂಡ ನಮ್ಮನ್ನು ಪ್ರಫುಲ್ಲವಾಗಿರಿಸುತ್ತದೆ. ಅಲ್ಲದೆ ತೀರ್ಥವನ್ನು ಸೇವಿಸುವಾಗ, ಕೊಡುವಾಗ ಹೇಳುವ ಈ ಮಂತ್ರವನ್ನು [ಶ್ಲೋಕ] ಗಮನಿಸಿ, 'ಅಕಾಲ ಮೃತ್ಯು ಹರಣಂ, ಸರ್ವ ವ್ಯಾಧಿ ನಿವಾರಣಂ, ಸಮಸ್ತದುರಿತೋಪ ಶಮನಂ, ವಿಷ್ಣು ಪಾದೋದಕಂ ಶುಭಂ.'

**ಪಂಚಾಮೃತ (ಪ್ರಸಾದ) :**

ಪಂಚಾಮೃತದಲ್ಲಿ ಹಾಲು, ಮೊಸರು, ಸಕ್ಕರೆ, ತುಪ್ಪ, ಜೇನು ಸೇರಿಸಿ ತಯಾರಿಸುತ್ತಾರೆ. ಕೆಲವೊಮ್ಮೆ ಬಾಳೆಹಣ್ಣು, ಎಳನೀರು, ಕೇಸರಿ, ಏಲಕ್ಕಿ, ಅವಲಕ್ಕಿಯನ್ನು ಪ್ರಸಾದದಲ್ಲಿ ಸೇರಿಸುತ್ತಾರೆ. ಹಾಲು ಮತ್ತು ತುಪ್ಪವು ಆಮ್ಲ ಪಿತ್ತವನ್ನು ಶಮನ ಮಾಡಿದರೆ, ಮೊಸರು ಜೀರ್ಣ ಕ್ರಿಯೆಯನ್ನು ವೃದ್ಧಿ ಪಡಿಸುತ್ತದೆ. ಸಕ್ಕರೆ ಶಕ್ತಿ ನೀಡಿದರೆ ಜೇನುತುಪ್ಪ ಸರ್ವಗುಣ ಯುಕ್ತವಾದುದು. ರಕ್ತವನ್ನು ಶುದ್ಧಿಮಾಡುವುದಲ್ಲದೆ ಚರ್ಮಕ್ಕೆ ಕಾಂತಿಯನ್ನು ಕೊಡುತ್ತದೆ. ಬಾಳೆಹಣ್ಣು ಹಲವು ವಿಧದ ಕರುಳಿನ ಹುಣ್ಣುಗಳನ್ನು ಗುಣಪಡಿಸುತ್ತದೆ. ಇವುಗಳನ್ನೆಲ್ಲಾ ವಿಗ್ರಹಕ್ಕೆ ಅಭಿಷೇಕ ಮಾಡಿರುವುದರಿಂದ ಹಲವು ರಾಸಾಯನಿಕ ವಸ್ತುಗಳು, ಕಬ್ಬಿಣಾಂಶ ನಮ್ಮ ಶರೀರಕ್ಕೆ ಸೇರುವುದು.

ದೇವರ ಮೂರ್ತಿಯನ್ನು ಮಾಡಲು ಶುದ್ಧವಾದ [ದೋಷರಹಿತ] ವಿಶಿಷ್ಟವಾದ ಶಿಲೆಯನ್ನು ಬೆಟ್ಟ ಗುಡ್ಡಗಳಿಂದ ಆರಿಸಿ ತರುತ್ತಾರೆ. ಆ ಕಲ್ಲುಗಳು ಹಲವಾರು ವರುಷಗಳಿಂದ ಬಿಸಿಲು, ಬೆಳದಿಂಗಳು, ಮಳೆ, ಗಾಳಿ, ಸಿಡಿಲು, ಮತ್ತು ಮಿಂಚುಗಳಿಗೆ ಮೈಯೊಡ್ಡಿ ನಿಂತಿರುವುದರಿಂದ ಒಂದು ರೀತಿಯ ರಾಸಾಯನಿಕ ಕ್ರಿಯೆಗೆ ಒಳಪಟ್ಟಿರುತ್ತದೆ. ಇಂತಹ ಶಿಲೆಗಳಿಂದ ನಿರ್ಮಿತವಾದ ವಿಗ್ರಹಗಳಿಂದ ಒಂದು ರೀತಿಯ ಅದೃಶ್ಯ ಕಿರಣಗಳು ಹೊಮ್ಮುತ್ತಿರುತ್ತವೆ. ಇವುಗಳನ್ನು ವೀಕ್ಷಿಸಿದಾಗ ನಮ್ಮ ಮೈಯಲ್ಲಿ ಒಂದು ತರದ ಕಂಪನ ಉಂಟಾಗಿ, ಮುಖದಲ್ಲಿ ತೇಜಸ್ಸು ಹೊಮ್ಮುವುದು. ಇದರಿಂದಲೆ ಸದಾ ದೇವರ ಸಾನಿಧ್ಯದಲ್ಲಿ ಇರುವ ಅರ್ಚಕರ ಮುಖದಲ್ಲಿ ಗಂಭೀರವಾದ ತೇಜಸ್ಸು ಎದ್ದು ಕಾಣುತ್ತದೆ.

ಪೂಜಾ ಕಾಲದಲ್ಲಿ ಹೇಳುವ ವೇದ, ಮಂತ್ರ, ಘಂಟೆ

[6ನೇ ಪುಟ ನೋಡಿ]

## ಯುವ ಜನರೆ ಎಚ್ಚರಗೊಳ್ಳಿ !

ಯಾವ ಅಶುದ್ಧತೆಯು ಅಂತರಾತ್ಮವನ್ನು ಘಾಸಿಗೊಳಿಸುವುದೋ ಅವರ ಮುಖಾಂತರ ಎಚ್ಚರಗೊಳ್ಳುವುದು ಮತ್ತು ಎಚ್ಚರಿಸುವುದರ ಬಗ್ಗೆ ದೃಢ ಸಂಕಲ್ಪವನ್ನು ಕೈಗೊಳ್ಳುವುದೇ ಯುವ ಶಕ್ತಿಯನ್ನು ಸದುಪಯೋಗ ಪಡಿಸಿಕೊಳ್ಳುವುದಾಗಿದೆ.

ಪುರುಷಾರ್ಥವೆಂಬ ಬಿಲ್ಲನ್ನು ಎಂಸಿ, ಪ್ರಯತ್ನವೆಂಬ ಹುರಿಯನ್ನಿಡಿದು ಠೇಂಕಾರ ಮಾಡಿದರೆ ನಿಮ್ಮ ವಿಜಯವು ನಿಶ್ಚಿತವಾಗಿದೆಯೆಂದು ತಿಳಿಯಿರಿ.

ದ್ವೇಷಾಸೂಯೆ ಅಥವಾ ಪ್ರತೀಕಾರದ ಭಾವನೆಯ ಅಗ್ನಿಯನ್ನು ತಮ್ಮ ಮನಸ್ಸಿಗೆ ಕಿಚ್ಚಿಟ್ಟಿಸಿ ತಾವು ಅದರಲ್ಲಿ ಸುಡುವುದು ಮತ್ತು ಬೇರೆಯವರ ಮೇಲೂ ಕ್ರೋಧವೆಂಬ ಜ್ವಾಲೆಯಿಂದ ಗೋಲಿಬಾರ್ ಮಾಡಿಸಿ ಅವರೊಡನೆ ಶತ್ರುವಿನಂತೆ ವ್ಯವಹರಿಸುವುದು ಅಂದರೆ ದುಷ್ಟತೆಯ ಧ್ವಜವನ್ನು ಮೇಲೇರಿಸಿದಂತೆಯೇ.

ಲೋಭವೆಂಬ ಮಧುರವಾದ ವಿಷದ ಪ್ರಭಾವದಿಂದ ಜಗತ್ತಿನಲ್ಲಿ ಅನ್ಯಾಯ ಹಾಗೂ ಹಾಹಾಕಾರಗಳ ಕೂಗು ಎಲ್ಲೆಡೆ ಪ್ರತಿಧ್ವನಿಸುತ್ತಿದೆ. ಆ ಧ್ವನಿಯಿಂದಲೇ ಮನುಕುಲ ನಶಿಸುತ್ತದೆ.

ತಮ್ಮ ಪ್ರಾಕೃತಿಕ ಸೌಂದರ್ಯವನ್ನು ತ್ಯಜಿಸಿ ತುಂಬಾ ಹಣವನ್ನು ವೆಚ್ಚಮಾಡಿ ಪ್ರತಿದಿನವೂ ತಮ್ಮ ಮುಖಪುಟವನ್ನು ಹಾಳು ಮಾಡಿಕೊಳ್ಳುತ್ತಾರೆ. ಅಂದರೆ ಪ್ರಕೃತಿಯ ಹಿಂದೆ ಬಿದ್ದು ತಮ್ಮನ್ನು ಅದಕ್ಕಿಂತಲೂ ಉತ್ತಮವಾದ ಕಲಾಕಾರನೆಂದು ತಿಳಿದುಕೊಳ್ಳುತ್ತಾರೆ

ಮುಖದ ಮೇಲೆ ಮಂದಹಾಸವಿದ್ದರೆ ಅದೇ ಸರ್ವಶ್ರೇಷ್ಠವಾದ ಪವಾಡವಾಗಿದೆ. ಕಣ್ಣಿನಲ್ಲಿ ಆತ್ಮೀಯತೆಯೇ ಅತ್ಯುತ್ತಮವಾದ ಆಕರ್ಷಣೆಯಾಗಿದೆ ಮತ್ತು ಶಾಂತಿ, ಪವಿತ್ರತೆ, ಸಂತೋಷ ನಮ್ರತೆ ಹಾಗೂ ಸರಳತೆಯೇ ಸರ್ವಶ್ರೇಷ್ಠವಾದ ಸುಗಂಧವಾಗಿದೆ. ಇವುಗಳನ್ನು ಬಳಸುವವರು ತಾವು ದೇಹ ಅಭಿಮಾನಿಗಳಾಗಿ ಅವನತಿಯಿಂದ ಹೊರಬರುತ್ತಾರೆ.

ಯುವತಿಯರು ಕೃತ್ರಿಮವಾದ ಶೃಂಗಾರವನ್ನು ಮಾಡಿಕೊಂಡು, ಮಿಂಚಿನಂತ ಬಟ್ಟೆಗಳನ್ನು ತೊಟ್ಟುಕೊಂಡು, ದೇಹವನ್ನು ಸರಿಯಾಗಿ ಮುಚ್ಚಿಕೊಳ್ಳದೆ, ತಳುಕು–ಬಳಕಿನಿಂದ ಮಾತನ್ನಾಡಿ ಪುರುಷರನ್ನು ಅಂದರೆ ವಿಶೇಷವಾಗಿ ಯುವಕರ ಗಮನವನ್ನು ತಮ್ಮೆಡೆಗೆ ಆಕರ್ಷಿಸಿಕೊಳ್ಳುತ್ತಾರೆ ಮತ್ತು ಅವರ ಆಕರ್ಷಣೆಗೆ ಒಳಗಾಗುವುದು ಅಂದರೆ ಸಮಾಜದ ಪತನಕ್ಕೆ ನಿಮಿತ್ತರಾಗುವುದೇ ಎಂದರ್ಥ. ಇದೇ ಅತ್ಯಾಚಾರಕ್ಕೆ ಮೂಲವಾಗಿದೆ

ಯುವತಿ, ನೀನಂತೂ ಪವಿತ್ರ ಸ್ವರೂಪಿಯಾಗಿರುವೆ, ನಿನ್ನ ಹೆಸರೇ ಸರಳತೆ. ನೀನು ಜಗತ್ತಿನಲ್ಲಿ ಸರಳತೆಯ ಚೈತನ್ಯ ಮೂರ್ತಿ, ಪವಿತ್ರತೆಯ ಸಜೀವ ಮೂರ್ತಿ ನಿನ್ನ ಈ ರೂಪವು ಜನ ಮನದಲ್ಲಿ ದೇವತೆಯ ದರ್ಶನವನ್ನೀಯಲಿ. ಆದುದರಿಂದ ಯುವತಿಯರೇ ಮತ್ತೆ ನಿಮ್ಮ ಪವಿತ್ರ ಸ್ವರೂಪವನ್ನು ಪರೀಕ್ಷಿಸಿಕೊಳ್ಳಿರಿ ಹಾಗೂ ಅನ್ಯರಿಗೂ ಪವಿತ್ರ ದೇವತಾ ಮೂರ್ತಿಯ ದರ್ಶನ ಮಾಡಿಸಿರಿ. ●

—ಸಂಗ್ರಹ : ತೆಕ್ಕಡ ಬಿ. ಕುಮಾರ್,
ಮುತ್ತಾರ್ಮುಡಿ

---

[ 5ನೇ ಪುಟದಿಂದ ]

ಜಾಗಟೆಗಳ ಸದ್ದಿನೊಂದಿಗೆ ಉಂಟಾಗುವ ಓಂಕಾರ ನಾದ ತರಂಗಗಳು ಇಡೀ ದೇವಸ್ಥಾನವನ್ನೇ ವ್ಯಾಪಿಸುತ್ತದೆ. ರಾಗಗಳಿಂದ ಅನೇಕ ರೋಗಗಳು ನಿವಾರಣೆ ಆಗುವುದಲ್ಲದೇ ವಿಶಿಷ್ಟ ರಾಗ ತರಂಗಗಳು ಭಕ್ತರ ಮೈ ಮನಗಳನ್ನು ಪ್ರವೇಶಿಸಿ ದುಗುಡ ದುಮ್ಮಾನಗಳನ್ನು ಹೋಗಲಾಡಿಸಿ ಶಾಂತವಾಗಿರಿಸುತ್ತದೆ

ದೇವಸ್ಥಾನದ ಪರಿಸರಗಳಲ್ಲಿ ಸಾಮಾನ್ಯವಾಗಿ ಅರಳಿ, ಅಶ್ವತ್ಥ, ಬೇವು, ತುಳಸಿ, ಬಿಲ್ವ ಮುಂತಾದ ಔಷದೀಯ ಗುಣವುಳ್ಳ ಗಿಡ ಮರಗಳನ್ನು ಬೆಳೆಸುತ್ತಾರೆ. ಇವುಗಳ ಮಧ್ಯೆ ಸಂಚರಿಸುವಾಗ ಹೆಚ್ಚು ಅಮ್ಲಜನಕ ದೊರಕುವುದು. ಇವುಗಳ ಮೇಲಿನಿಂದ ಬೀಸಿದ ಗಾಳಿ ನಮ್ಮ ಶರೀರವನ್ನು ಸ್ಪರ್ಶಿಸಿದಾಗ ಅನೇಕ ರೋಗಾಣುಗಳು ನಾಶವಾಗುತ್ತದೆ. ಸೇವಿಸಿದಾಗ ಶ್ವಾಸಕೋಶಗಳ ಶುದ್ಧಿಯಾಗುತ್ತದೆ. ತುಳಸಿಯ ವಾಸನೆಯಿಂದ ಕ್ಷಯರೋಗದ ನಿವಾರಣೆಯಾಗುವುದೆಂದು ಆಯುರ್ವೇದದಲ್ಲಿ ಹೇಳಿದೆ. ಬೇವಿನ ಗಾಳಿಯಿಂದ ಅನೇಕ ಸೋಂಕು ಉಂಟು ಮಾಡುವ ಕ್ರಿಮಿಗಳು ನಾಶವಾಗುವುದಲ್ಲದೆ ಅನೇಕ ಚರ್ಮ ರೋಗಗಳನ್ನು ಗುಣಪಡಿಸುವುದು. ಇಂತಹ ಒಳ್ಳೆಯ ಪರಿಣಾಮಕಾರಿಯಾದ ಪರಿಸರದಲ್ಲಿ ಸ್ವಲ್ಪ ಕಾಲ ಕಳೆಯುವುದರಿಂದ ನಮಗೆ ಎಷ್ಟೊಂದು ಉಪಯೋಗವಿದೆ ಅಲ್ಲವೆ ? ಇದನ್ನು ಅರಿಯದ ಮೂಢರು ದೇವಸ್ಥಾನಕ್ಕೆ ಹೋಗುವುದು ಮೂಢನಂಬಿಕೆ ಎಂಬರಲ್ಲ ಎಂತಹ ಪರಿಹಾಸ್ಯವಿದು ?

---

## ನಗೆ ಹನಿ

ಯಜಮಾನ : ಏನಯ್ಯಾ ಎಷ್ಟೋ ತಿಂಗಳಾಯ್ತು ನನ್ನ ಸಾಲ ತೀರಿಸದೆ ?

ಕೆಲಸದವ : ಸ್ವಾಮಿ, ಈ ಜನ್ಮದಲ್ಲಿ ಆ ನಿಮ್ಮ ಸಾಲ ತೀರಿಸಲಾರೆ ಬದಲು ನಿಮ್ಮ ಕಿರಿಯ ಮಗಳನ್ನು ಯಾವ ವರದಕ್ಷಿಣೆಯಿಲ್ಲದೆ ಮದುವೆಯಾಗ್ತೀನೆ.

—ತೋಟಂಬೈಲು ಎ. ಗಣಪತಿ, ನರಿಯಂದಡ.

# ಗೌಡರ ವಿವಾಹ ಪದ್ಧತಿಯ ಅವಲೋಕನ

[ಮುಂದುವರಿದ ಭಾಗ]

ಅಭಿಜ್ಞಾನ ಶಾಕುಂತಲಾ ನಾಟಕದಲ್ಲಿ ಕಣ್ವ ಮುನಿಗಳು ಶಕುಂತಳೆಗೆ ಈ ರೀತಿಯಾಗಿ ಬುದ್ಧಿವಾದ ಹೇಳುತ್ತಾರೆ–'ಹಿರಿಯರ ಸೇವೆಯನ್ನು ನಿಷ್ಠೆಯಿಂದ ಮಾಡು, ಸವತಿಯರೊಡನೆ ಪ್ರಿಯ ಸಖಿಯಂತೆ ನಡೆದುಕೋ. ಪತಿಯು ಕೋಪಗೊಂಡಾಗ ಅವನನ್ನು ವಿರೋಧಿಸಬೇಡ. ಸೇವಕರ ವಿಷಯದಲ್ಲಿ ತುಂಬಾ ಸೌಜನ್ಯದಿಂದ ವರ್ತಿಸು. ಐಶ್ವರ್ಯ ಅಹಂಕಾರವನ್ನು ತಾಳಬೇಡ. ಹೀಗೆ ನಡೆದುಕೊಂಡ ಯುವತಿಯರು ಗೃಹಿಣಿಯ ಗೌರವ ಸ್ಥಾನವನ್ನು ಪಡೆಯುವರು. ಇದಕ್ಕೆ ವಿರುದ್ಧವಾಗಿ ನಡೆದುಕೊಂಡವರು ಅವರ ಕುಲಕ್ಕೆ ವ್ಯಥೆಯನ್ನುಂಟುಮಾಡುವರು. ಇದೇ ಮಾತನ್ನು ಮುತ್ತೈದೆಯರು ಸೋಭಾನೆಯಾಗಿ ಹೆಣ್ಣು ಗಂಡು ವಹಿಸಿಕೊಡುವ ಸಮಯದಲ್ಲಿ ಹೀಗೆ ಹೇಳುತ್ತಾರೆ.

ಮಾವ ಬರುವಾಗ ಎದುರಿಗೆ ನಿಲ್ಲದಿರು ಜಾನಕಿ, ಮಾವನಿಗೆ ಉತ್ತರ ಕೊಡದಿರು। ಮಾವನವರಿಗೆ ಉತ್ತರ ಕೊಡದೀರು ಜಾನಕಿ। ಹಾಲು ಹಣ್ಣು ಕೊಟ್ಟು ಸಲುಗ್ಯಾರು॥ ಅತ್ತೆ ಬರುವಾಗ ಎದುರು ನಿಲ್ಲದಿರು ಜಾನಕಿ। ಅತ್ತೆಗೆ ಉತ್ತರ ಕೊಡದೀರು। ಅತ್ತೆಗೆ ಉತ್ತರ ಕೊಡದೀರು ಜಾನಕಿ। ಬಾ, ಬಾಲೆಯೆಂದು ಕರೆದಾರು॥ ಪುರುಷ ಬರುವಾಗ ದೇವರೆಂಬಂತೆ ನಿಂತಿರು ಜಾನಕಿ।

ಪ್ರೊ|| ಪೂಜಾರಿರ ಮೊಣ್ಣಪ್ಪ, ಬೆಂಗಳೂರು

ಪುರುಷನಿಗೆ ಉತ್ತರ ಕೊಡದೀರು। ಪುರುಷನಿಗೆ ಉತ್ತರ ಕೊಡದೀರು ಜಾನಕಿ। ಪಟ್ಟೆಯ ಕೊಟ್ಟು ಸಲುಗ್ಯಾರು॥ ಮಗಳತ್ತೆ ಕಳುಹಿಸಿ ತಾವಿತ್ತ ತಿರುಗಿದರು। ಮಗಳು ಸಾಕಿನ್ನೀ ಜನ್ಮಕ್ಕೆ। ಬಳೆಸೆಟ್ಟಿ ಬಳೆಯಾಕೆ ತಂದಿರೋ। ಬಳೆಯಿಡುವ ಮಗಳು ಮನೆಲಿಲ್ಲ। ಬಳೆಯಿಡುವ ಮಗಳು ಮನೆಲಿಲ್ಲ। ಮಂಟಪದಲ್ಲಿ ಅವಳೀಗ ಭಾಗ್ಯವಂತರ ಮನೆಗೆ ನಡೆದಾಳು॥ ಹೂವು ಮುಡಿವಾ ಮಗಳು ಮನೆಲಿಲ್ಲ। ಮಂಟಪದಲಿಲ್ಲ ಅವಳೀಗ ಬಾಳುವವರ ಮನೆಗೆ ನಡೆದಾಳು॥ ಕೆರೆ ಸುತ್ತ ಕೇದಿಗಡೆ, ಮನೆ ಸುತ್ತ ಮಲ್ಲಿಗೆ ಕೊಯ್ದು ಮುಡಿಯುವಾ ಮಗಳಿಗೆ, ಕೊಯ್ದು ಮುಡಿಯುವಾ ಮಗಳಿಲ್ಲ ಶೆಟ್ಟಿಗರೆ। ಅವಳೀಗ ಬಾಳುವವರ ಅರಮನೆಗೆ ನಡೆದಾಳು॥

ಮಾತಾಡಲು। ತುಂಬಿದ ಕಣ್ಣು ಜಲ ನೀರು॥ ತಾಯಿ ತಂದೆಯರೆಲ್ಲಾ ಮುತ್ತಿನ ತೋರಣ ತನಕ। ಚಿಕ್ಕಕ್ಕ ಮಕ್ಕಳು ಹೊಳೆ ತನಕ। ಚಿಕ್ಕಕ್ಕ। ಮಕ್ಕಳು ಹೊಳೆತನಕ ಬರುವಾಗ। ಚಿಂತಿಸದಿರು ಮಗಳೆ ಮನದಲ್ಲಿ।

ಗೌಡರಲ್ಲಿ ಆಟಿ ಕೂರುವ ಪದ್ಧತಿಗೂ ಶಕುಂತಳಾ ನಾಟಕದಲ್ಲಿ ದೂರ್ವಾಸ ಮುನಿಗಳ ಶಾಪದಿಂದಾಗಿ ಬೇರ್ಪಟ್ಟ ದುಶ್ಯಂತ ಶಕುಂತಳೆಯರ ವಿರಹ–ಪುನರ್ಮಿಲನ ಸಂದರ್ಭದ ಹಿನ್ನೆಲೆ :

ಅಭಿಜ್ಞಾನ ಶಾಕುಂತಳಾ ನಾಟಕ ದೂರ್ವಾಸ ಮುನಿ ಶಾಪದಿಂದಾಗಿ ದುಷ್ಯಂತನು ಶಕುಂತಳೆಯೊಡನೆ ಗಾಂಧರ್ವ ವಿವಾಹವಾದಾಗ ನೆನಪಿಗಾಗಿ ಕೊಟ್ಟ ಉಂಗುರವು ಶಚೀತೀರ್ಥ ನದಿಯಲ್ಲಿ ಕಳಚಿ ಬಿದ್ದು ಹೋದ್ದರಿಂದ ದುಶ್ಯಂತನಿಗೆ ಶಕುಂತಳೆಯನ್ನು ವಿವಾಹಗೊಂಡರೂ ಮರೆತು ಹೋಗಿ ಶಕುಂತಳೆಯನ್ನು ಮಾರೀಚಿ ಋಷಿಗಳ ಹೇಮಕೂಟಕ್ಕೆ ತಂದು ಬಿಟ್ಟು ಶಕುಂತಳೆ ಮಾರೀಚಿ ಆಶ್ರಮದಲ್ಲಿ ಭಾವೀ ಚಕ್ರವರ್ತಿಯಾಗಲಿರುವ ಭರತನನ್ನು ಹೆರುತ್ತಾಳೆ. ಕೆಲವು ವರ್ಷಗಳು ಕಳೆಯುವ ಸಮಯದಲ್ಲಿ ದೇವೇಂದ್ರನ ಸಹಾಯಕ್ಕಾಗಿ ಹೋಗಿ ರಾಕ್ಷಸರನ್ನು ಸಂಹಾರ ಮಾಡಿ ಹಿಂದಿರುಗುವಾಗ ವಿಮಾನದಿಂದಲೇ ವೀಕ್ಷಿಸಿ ಮಾರೀಚಿ ಮುನಿಯ ತಪೋವನವಾದ ಹೇಮಕೂಟವನ್ನು ಕಂಡು ಅಲ್ಲಿ ಮಾರೀಚಿ ಮುನಿಗಳಿಗೆ ಪ್ರದಕ್ಷಿಣೆ ಮಾಡಿ ಹೋಗಬೇಕೆಂದು ಆಶ್ರಮಕ್ಕೆ ಬಂದಾಗ ಅಲ್ಲಿ ಶಕುಂತಳೆ ಮತ್ತು ಭರತನನ್ನು ಕಾಣುವ ಯೋಗ ಪ್ರಾಪ್ತವಾಗಿ ಶಕುಂತಳೆ ಪಾದಗಳಿಗೆ ಮಣಿದು ಕ್ಷಮೆಯನ್ನು ಕೇಳುವ ಪರಿಸ್ಥಿತಿಯು, ಕಣ್ವ ಋಷಿ ಆಶ್ರಮದಲ್ಲಿ ಕಂಡು ಮೋಹಗೊಂಡ ದುಶ್ಯಂತನ ಪ್ರೀತಿಗೂ ಹೇಮಕೂಟದಲ್ಲಿ ಕಂಡು ಉಕ್ಕಿ ಬಂದ ಪ್ರೀತಿಗೂ ವ್ಯತ್ಯಾಸವಿದೆ. ಕಣ್ವಾಶ್ರಮದಲ್ಲಿ ಶಕುಂತಳೆಯು ಪ್ರೀತಿಸಿದ ಪ್ರೀತಿಯು ಕಾಮ ವಾಸನೆಯಿಂದ ಕೂಡಿದ್ದಾಗಿದ್ದರೆ, ಮಾರೀಚಾಶ್ರಮದಲ್ಲಿ ಉದ್ಭವಿಸಿದ ಪ್ರೀತಿಯು ಅಕ್ಕಸಾಲಿಗನು ಚಿನ್ನವನ್ನು ಮೂಸೆಯಲ್ಲಿ ಕರಗಿಸಿದ ಚಿನ್ನದಂತೆ ಆತ್ಮೀಯವಾದ ಶುದ್ಧವಾದ ಪ್ರೀತಿಯಾಗಿದೆ.

ಈ ರೀತಿಯ ಪ್ರೀತಿಯನ್ನು ಗೌಡರ ನವ ದಂಪತಿಗಳಲ್ಲಿ ಮೂಡಿಸುವುದಕ್ಕಾಗಿ ಆಟಿ ಕೂರುವ ಪದ್ಧತಿಯನ್ನು ಅಳವಡಿಸಿ ಆಟಿ ತಿಂಗಳು ಗೌಡರಿಗೆ ಅಶುಭ ಮಾಸವೆಂದು ಪರಿಗಣಿಸಿ ಆ ತಿಂಗಳಲ್ಲಿ ನವ ದಂಪತಿಗಳು ಒಂದುಗೂಡಿ ಇರುವುದು ನಿಷೇಧವೆಂದು ಹೊಸದಾಗಿ ಮದುವೆಯಾದ ಮದುಮಗಳನ್ನು ಅವಳ ತಂದೆ–ತಾಯಿಯ ಕಡೆಯವರು ಆಟಿ ತಿಂಗಳು [ಜುಲೈ 15ರ ನಂತರ] ಪ್ರಾರಂಭವಾಗುವಾಗಲೇ ಗಂಡನ ಮನೆಯಿಂದ ಕರೆದುಕೊಂಡು ಬಂದು ತವರು ಮನೆಯಲ್ಲಿ ಇಟ್ಟುಕೊಳ್ಳುತ್ತಾರೆ.

[8ನೇ ಪುಟ ನೋಡಿ]

# ಆರೋಗ್ಯ ಚಿಂತನ :

## ಗಂಟಲು ನೋವು [ಟಾನ್ಸಿಲ್]

ಗಂಟಲಿನೊಳಗಿನ ಎರಡೂ ಬದಿಯಲ್ಲಿರುವ ಪುಟ್ಟ ಗಂಟಿನಂಥ ಟಾನ್ಸಿಲ್‌ಗೆ ಸೋಂಕು ತಗಲಿದಲ್ಲಿ ದೊಡ್ಡದಾಗಿ ನೋಯಲಾರಂಭಿಸುತ್ತದೆ. ಇದಕ್ಕೆ 'ಟಾನ್ಸಿಲೈಟಿಸ್' [Tonsillitis] ಎಂದು ಹೆಸರು. ವೈದ್ಯಕೀಯ ಸಮಸ್ಯೆಗಳಲ್ಲಿ ಇದೊಂದು ಅತ್ಯಂತ ಸಾಮಾನ್ಯವಾದ ತೊಂದರೆಯಾಗಿದೆ. ಮಕ್ಕಳಲ್ಲಿ ಹಾಗೂ ಹದಿಹರೆಯದವರಲ್ಲಿ ಹೆಚ್ಚಾಗಿ ಕಂಡು ಬರುವ ಈ ತೊಂದರೆ ಪದೇ ಪದೇ ಆಗುತ್ತಿರುತ್ತದೆ. ಈ ರೀತಿ ಪದೇ ಪದೇ ಬರುವ 'ಗಂಟಲುನೋವು' ರೋಗಿಗೆ ಒಂದು ಬಿಡಿಸಲಾರದ ಸಮಸ್ಯೆಯಾಗಿ ಕಾಡಲಾರಂಭಿಸುತ್ತದೆ.

ಸಾಮಾನ್ಯವಾಗಿ ನೆಗಡಿಯೊಂದಿಗೆ ಇದು ಶುರುವಾಗುತ್ತದೆ. ತಂಪಾದ ಆಹಾರ ಪದಾರ್ಥಗಳ ಸೇವನೆ ಸಹ ಇದಕ್ಕೆ ಕಾರಣವಾಗಬಹುದು. ವ್ಯಕ್ತಿಗೆ ಅಲರ್ಜಿ ಇರುವ ವಸ್ತುವನ್ನು ಸೇವಿಸಿದಲ್ಲಿ ಸಹ ಟಾನ್ಸಿಲೈಟಿಸ್ ಆಗಬಹುದು.

ಡಾ|| ಎನ್. ಎಸ್. ಪ್ರವೀಣ, ಎಂ ಡಿ., ಕೇರಳ

ಟಾನ್ಸಿಲೈಟಿಸ್ ಆದಾಗ ಟಾನ್ಸಿಲ್‌ಗ್ರಂಥಿ ದೊಡ್ಡದಾಗಿ, ರಕ್ತಸಂಚಾರ ಜಾಸ್ತಿಯಾಗುವುದರಿಂದ ಕೆಂಪಾಗಿ ಕಾಣುತ್ತದೆ. ಕೆಲವೊಮ್ಮೆ ಕೀವು ಸಹ ಇರಬಹುದು. ಆಹಾರ ನುಂಗುವಾಗ ನೋವು ಕಾಣಿಸಿಕೊಳ್ಳುತ್ತದೆ. ಜೊತೆಗೆ ಜ್ವರ, ಮೈ ನೋವು, ಸುಸ್ತು ಸಹ ಇರಬಹುದು. ದವಡೆಯ ಕೆಳಭಾಗದ ಹಾಲ್ರಸ್ ಗ್ರಂಥಿ [Lymph node] ದಪ್ಪವಾಗಿ ನೋಯುತ್ತಿರುತ್ತದೆ. ಕೆಲವೊಮ್ಮೆ ಸೋಂಕು ಶ್ವಾಸನಾಳ, ಶ್ವಾಸಕೋಶಕ್ಕೂ ಹರಡುವುದರಿಂದ ಕೆಮ್ಮು, ಕಫ ಕಾಣಿಸಿಕೊಳ್ಳಬಹುದು.

ಕೆಲವರಲ್ಲಿ ಟಾನ್ಸಿಲೈಟಿಸ್ ಪದೇ ಪದೇ ಆಗುತ್ತಿರುತ್ತದೆ. ಇದರಿಂದಾಗಿ ಕೆಲವೊಮ್ಮೆ ಮೂತ್ರನಾಳ ಸೋಂಕು [Nephritis] ಹಾಗೂ ರ್‍ಯುಮಾಟಿಕ್ ಜ್ವರ [Rheumatic fever] ತೊಂದರೆ ಸಹ ಮುಂದೆ ಉದ್ಭವವಾಗಬಹುದಾಗಿದೆ.

ಗಂಟಲು ನೋವಿರುವಾಗ ಒಂದು ಗ್ಲಾಸು ಬಿಸಿನೀರಿಗೆ [ಅತಿಯಾದ ಬಿಸಿ ಬೇಡ] ಸ್ವಲ್ಪ ಉಪ್ಪು [ಅರ್ಧ ಚಮಚ] ಬೆರೆಸಿ ಗಂಟಲಲ್ಲಿ ಹಾಕಿ ಗಳಗಳ ಮಾಡಬೇಕು. [Gargling] ದಿನಕ್ಕೆ 3-4 ಬಾರಿ ಈ ರೀತಿ ಮಾಡುತ್ತಿರಬೇಕು. ನೆಗಡಿ, ಮೂಗು ಕಟ್ಟಿಕೊಳ್ಳುತ್ತಿದ್ದಲ್ಲಿ ಕುದಿಯುವ ನೀರಿನ ಆವಿಯನ್ನು ಸೇವಿಸಬೇಕು [steam inhalation]. ಕುದಿಯುವ ನೀರಿಗೆ ಸ್ವಲ್ಪ ವಿಕ್ಸ್ ಹಾಕಿ ಸೇದಿಕೊಳ್ಳಬಹುದು. ಇದರಿಂದ ಕಟ್ಟಿದ ಮೂಗು ಸಡಿಲವಾಗುತ್ತದೆ. ಜ್ವರ, ಮೈ ನೋವಿಗೆ ಕ್ರೋಸಿನ್ [Crocin] ಮಾತ್ರೆಯನ್ನು ಬಳಸಬಹುದು. ಬಿಸಿನೀರನ್ನೇ ಕುಡಿಯಬೇಕು. ವೈದ್ಯರ ಸಲಹೆಯಂತೆ ಜೀವಿರೋಧಕ (Antibiotics) ಹಾಗೂ ನೋವು ನಿವಾರಕ ಔಷಧಗಳನ್ನು ತೆಗೆದುಕೊಳ್ಳಬೇಕು.

ಟಾನ್ಸಿಲೈಟಿಸ್ ವಿರುದ್ಧ ಪೆನಿಸಿಲಿನ್ (Pencilline) ಇಂಜೆಕ್ಷನ್ ಅತ್ಯಂತ ಯಶಸ್ವಿಯಾಗಿ ಕೆಲಸಮಾಡುತ್ತದೆ. ಇದನ್ನು ಕನಿಷ್ಠ 7ರಿಂದ 10 ದಿನಗಳವರೆಗೆ ತೆಗೆದುಕೊಳ್ಳಬೇಕು. ಪದೇ ಪದೇ ಟಾನ್ಸಿಲೈಟಿಸ್ ಆಗುತ್ತಿದ್ದಲ್ಲಿ (ವರ್ಷಕ್ಕೆ ನಾಲ್ಕು ಬಾರಿಗಿಂತಲೂ ಜಾಸ್ತಿ) ಚಿಕ್ಕ ಶಸ್ತ್ರಚಿಕಿತ್ಸೆಯಿಂದ ಟಾನ್ಸಿಲ್‌ಗಳನ್ನು ತೆಗೆಸುವುದು [Tonsillectomy] ಕ್ಷೇಮಕರ. ●

## ಉದ್ಯೋಗ ವಾರ್ತೆ

### ಸೇನೆಗೆ ಭರ್ತಿ

ವಿಜ್ಞಾನ ಅಥವಾ ಕಲಾ ವಿಷಯಗಳ ಪದವೀಧರ ಪುರುಷ ಅಭ್ಯರ್ಥಿಗಳಿಂದ 'ಶಿಕ್ಷಣ ಹವಾಲ್ದಾರ್' ಹುದ್ದೆಗಳಿಗೆ ಭಾರತೀಯ ಸೇನೆ ಭರ್ತಿ ಮಾಡಿಕೊಳ್ಳಲಿದೆ. ಅಕ್ಟೋಬರ್ 1, 1999ಕ್ಕೆ ಅನ್ವಯವಾಗುವಂತೆ 20-25 ವರ್ಷ ವಯೋಮಿತಿಯ ಅಭ್ಯರ್ಥಿಗಳು ನೇಮಕಾತಿಗೆ ಅರ್ಹರು

ಇಂಗ್ಲಿಷ್ ಅಥವಾ ಹಿಂದಿ ಜ್ಞಾನ ಕಡ್ಡಾಯ. ಅರ್ಹ ಅಭ್ಯರ್ಥಿಗಳು ಏಪ್ರಿಲ್ 9 ಮತ್ತು 10 ರಂದು ಬೆಳಿಗ್ಗೆ 9 ಗಂಟೆಗೆ, 148, ರೆಸಿಡೆನ್ಸಿ ರಸ್ತೆ, ಬೆಂಗಳೂರು ಈ ವಿಳಾಸದಲ್ಲಿ ಅಥವಾ ಬೆಳಗಾವಿ ಹಾಗೂ ಮಂಗಳೂರಿನಲ್ಲಿರುವ ಶಾಖಾ ಭರ್ತಿ ಕೇಂದ್ರಗಳಲ್ಲಿ ಹಾಜರಿರುವಂತೆ ಸೂಚಿಸಲಾಗಿದೆ. ಅಭ್ಯರ್ಥಿಗಳು ಎಲ್ಲ ಅಧಿಕೃತ ದಾಖಲೆಗಳು ಮತ್ತು ತಮ್ಮ ಭಾವಚಿತ್ರವನ್ನು ತರಬೇಕು

### ತರಬೇತಿ ಶಿಬಿರ

ಅಕಾಡೆಮಿ ಆಫ್ ಮ್ಯಾನೇಜ್‌ಮೆಂಟ್ ಅಂಡ್ ಕೆರಿಯರ್ ಡೆವಲಪ್‌ಮೆಂಟ್ ಸಂಸ್ಥೆಯು ಹತ್ತನೆ ತರಗತಿ ವಿದ್ಯಾರ್ಥಿಗಳಿಗೆ ಪಠ್ಯಾಧಾರಿತ ಮತ್ತು ವ್ಯಕ್ತಿ ವಿಕಸನ ತರಬೇತಿ ಶಿಬಿರವನ್ನು ಏಪ್ರಿಲ್ ತಿಂಗಳಲ್ಲಿ ಏರ್ಪಡಿಸಿದೆ. ಮೈಸೂರಿನಲ್ಲಿ ನಡೆಯುವ ಈ ಶಿಬಿರ ಏಪ್ರಿಲ್ 25 ರಿಂದ ಆರಂಭವಾಗಿ ಮೇ 30ಕ್ಕೆ ಮುಕ್ತಾಯವಾಗುತ್ತದೆ

ಆಸಕ್ತರು ವಿವರಗಳಿಗೆ ಲತಾ ಜಯಪ್ರಕಾಶ್, ನಿರ್ದೇಶಕರು 462, 1ನೇ 'ಸಿ' ಮುಖ್ಯರಸ್ತೆ, 4ನೇ ಹಂತ, ಜೆ. ಪಿ. ನಗರ, ಬೆಂಗಳೂರು-78 (ದೂರವಾಣಿ-6656329, 6685728, 0821-561755) ಇವರನ್ನು ಸಂಪರ್ಕಿಸಲು ಕೋರಲಾಗಿದೆ.

## ಮೊದಲ ಹೆಜ್ಜೆ

ಕವನ ಬರೆಯಲು ನಾನೇನು ಕವಿಯಲ್ಲ
ಬರೆಯದೇ ನನಗೆ ಬೇರೆ ದಾರಿಯೇ ಇಲ್ಲ
ನನ್ನ ಮನಸ್ಸಿನಲ್ಲಿ ಮೂಡಿದ ಭಾವನೆಗಳೇ
ಮೂಡಿ ಬರುತ್ತಿದೆ ಇಂದು ಕವಿತೆಗಳಾಗಿ

ಮೊದಲು ಇರಲಿಲ್ಲ ನನಗೆ ಬರೆಯಬೇಕೆಂಬ ಹಟ
ಸ್ವಲ್ಪ ಬೆಳೆಸಿಕೊಂಡಿದ್ದೆ ಕವಿತೆಗಳನ್ನು ಓದುವ ಚಟ
ಆ ಚಟವೇ ನನಗೆ ನೀಡಿದೆ ಸ್ಫೂರ್ತಿ
ಸಲ್ಲಲಿ ಹಿರಿಯ ಕವಿಗಳಿಗೆ ಕೀರ್ತಿ

ಇಲ್ಲಿ ಹೊಂದಿಲ್ಲ ನಾನು ಸ್ವಾರ್ಥದ ಮನೋಭಾವ
ತುಂಬಲಿ ಜನಗಳು ನಾ ಬರೆಯುವ ಕವಿತೆಗಳಿಗೆ ಜೀವ
ಇಲ್ಲಿ ಕಾಣ ಬರುತ್ತಿಲ್ಲ ನಾನು ಒಂಟಿ ಎಂಬುದು
ಕಾವ್ಯವೆಂಬ ಸಂಗಾತಿ ನನಗೆ ದೊರೆತಿರುವುದಿಂದು

ನಾ ಬರೆಯುವ ಎಲ್ಲಾ ಕವಿತೆಗಳು
ಸೆಳೆಯಲಿ ಜನಗಳ ಮನಸ್ಸನ್ನು
ಅವರೇ ನನ್ನ ಕವಿತೆಗಳಿಗೆ ತೀರ್ಪುಗಾರರು
ಜೀವ ಕಳೆದು ಕೊಳ್ಳದಿರಲಿ ಈ ಕಾವ್ಯದ ಬೇರು

ಎಲ್ಲರೂ ನನ್ನ ಕವನಗಳನ್ನು ಮೆಚ್ಚಿ ಓದಿದರೆ
ಅವರು ನೀಡಿದಂತಾಗುತ್ತದೆ ನನಗೆ ಆಸರೆ
ಇದೇ ನಾನು ಕಾವ್ಯಲೋಕಕ್ಕೆ ಹಾರುತ್ತಿರುವ ಮೊದಲ ಹೆಜ್ಜೆ
ಒಂದಕ್ಕೂ ಬರದಂತೆ ಮುಂದಕ್ಕೆ ನುಗ್ಗಲಿ ನನ್ನ ಹೆಜ್ಜೆ.

— ನಂಗಾರು ತುಳಸಿ ಮೋಹನ್, ಮಂಡ್ಯ.

---

[7ನೇ ಪುಟದಿಂದ]

ಈ ರೀತಿ ಹೊಸದಾಗಿ ಮದುವೆಯಾದ ಹೆಣ್ಣು ಗಂಡು ಬೇರ್ಪಟ್ಟು ಒಂದು ತಿಂಗಳು ಅವರಿಬ್ಬರು ಮುಖವನ್ನೂ ಸಹ ನೋಡಬಾರದೆಂಬ ಕಟ್ಟು ಇರುವುದರಿಂದ ಅವರಿಬ್ಬರಲ್ಲಿ ಪ್ರೀತಿ ಪ್ರೇಮವು ಬರೇ ಕಾಮವಾಸನೆಯಿಂದ ಕೂಡಿರದೆ ಹೇಮಕೂಟದಲ್ಲಿ ಪುನರ್ಮಿಲನಗೊಂಡ ದುಶ್ಯಂತ, ಶಕುಂತಳೆಯರ ಸ್ಪಟಿಕದಂತಹ ನಿರ್ಮಲ ಪ್ರೇಮವಾಗಿ ಪರಿವರ್ತನೆಗೆ ದಾರಿಯಾಗುತ್ತದೆ. ಶಾಕುಂತಳಾ ನಾಟಕದಲ್ಲಿ ದೂರ್ವಾಸಮುನಿಯ ಶಾಪವು ಮೌಢ್ಯವಾಗಿ ಪರಿಣಮಿಸಿದರೆ, ಗೌಡರಲ್ಲಿ ಆಟಿ ಕೂರುವ ಪದ್ಧತಿಯು ಋಷಿಯ ಶಾಪವಲ್ಲದಿದ್ದರೂ ಕಾಲ ವಿಧಿಯ ಶಾಪವಾಗಿ ನವದಂಪತಿಗಳನ್ನು ಬೇರ್ಪಡಿಸಿ ಅವರಲ್ಲಿ ನಿರ್ಮಲ ಪ್ರೇಮ ಸಂಬಂಧ ಬೆಳೆಯಲು ಸಹಾಯಕವಾಗಿದೆ. ○

[ ಮುಂದುವರೆಯುವುದು]

## ಜನನಿ ಜನ್ಮದಾತೆ

ಜನನಿ ಜನ್ಮದಾತೆ ನೀ ಮಹಾತಾಯಿ
ನೀನು ಶಾಂತಿ ಮೂರ್ತಿ ಕಾಮಧೇನು ಭೂಮಿತಾಯಿ
ನವ ಚೇತನ ಆತ್ಮ ಒಂದಕ್ಕೆ ಜನನಿಯಾದ ತಾಯಿ
ನವಮಾಸ ಭಾರ ಹೊತ್ತು ಆಸರೆಯಾದ ತಾಯಿ

ಬಸುರಿ ನೋವಿನಲಿ ಜೀವವ ಪಣಕಿಟ್ಟು
ಬೆಳಕಿನ ಧರೆಗೆ ದಾರಿ ಕಾಣಿಸಿದ ತಾಯಿ
ನೋವನ್ನು ಸಹಿಸಿ ಕಷ್ಟವ ಮರೆತು
ಒಲುವಿನ ಮೊಲೆಹಾಲಿನಲ್ಲಿ ಪಾಲಿಸಿದ ತಾಯಿ

ಚಳಿಗಾಳಿಗೂ ಬಗ್ಗದೆ ಖಾಯಿಲೆ ಕಷ್ಟಕ್ಕೂ ಬಾಗದೆ
ಬೆನ್ನೊಡ್ಡಿ ಲಾಲಿಯ ಹಾಡಿ ಆಡಿಸಿ ನಲಿಸಿದ ತಾಯಿ
ಖಾಲಿ ಒಡಲಿನಲ್ಲೂ ನೋವುಗಳ ಮಡಿಲಲ್ಲೂ
ಕಂದನ ಕಂಬನಿಗೆ ಬೆದರಿ ಚುಂಬಕ ವಿತ್ತವಳು

ಹಾಲನ್ನೂ ತುಪ್ಪವನ್ನೂ ನಿತ್ಯವೂ ಕೊಡುವಳು
ತನ್ನ ಎದೆಯೊಳಗೆ ಬಚ್ಚಿಟ್ಟು ಬೆಚ್ಚಗೆ ಕಾಯುವಳು
ಹಾಲನ್ನುಣಿಸಿ ಮಜ್ಜನ ಮಾಡಿಸಿ ದೃಷ್ಟಿ ನಿವಾಳಿಸಿ
ಹೊದಿಸಿಟ್ಟು ತೊಟ್ಟಿಲ ಜೋಪಾನ ತೂಗುವಳು

ಎದ್ದಾಗ ಬಿದ್ದಾಗ ಕೂತಿದ್ದು ನಿಂತಾಗ
ತೊಡಕಿನ ತೊದಲ್ನುಡಿಗೆ ಸಂಬ್ರಮಿಸಿದಳು
ಕಾಣದ ಕಾಶಿಯ ದೂರದ ಚಂದಿರನ
ತೋರುತ್ತಾ ತುತ್ತನ್ನು ಬಾಯಿಗೆ ತೂರುವಳು

ರೊಟ್ಟಿಯ ಹಿಡಿದು ಹಠವ ಮಾಡುವ ಮುದ್ದಿನ
ಮಗುವೆಂದು ಮುತ್ತಿನ ಮಳೆಗೆರೆಯುವಳು
ಸಾವಿರ ತುಂಟಾಟವನ್ನಾಡುವ ಕಂದನ ಕಾಣಲು
ಧರೆಯೊಳಗಿಲ್ಲಾ ಈಪರಿಯ ಕೂಸೆಂದು ಬೀಗುವಳು

ಸಾವಿರ ಚಿಂತೆಯು ಮಿದುಳಲ್ಲಿ ಸಿಡಿಯಲು
ಕಂದನ ಕಿರುನಗೆ ಕಾಣಲು ಹರುಷವ ಹೊಂದುವಳು
ತೆವಳುತ್ತಾ ತೊದಲುತ್ತಾ ಕಾಲವ ಸವೆಸಲು
ನಡೆ ನುಡಿ ಕಲಿಸುತ್ತಾ ರಮಿಸುತ್ತಾ ನಲಿವಳು

ಕಂದನ ಹೊತ್ತಿನ ತುತ್ತಿನ ಕೂಳಿಗೆ ದುಡಿಯುತ್ತಾ
ದುಡಿಯುತ್ತಾ ತನ್ನಳಲುವನು ಮರೆತೇ ಬಿಡುವಳು
ಜೀವವ ತೇಯುತ್ತಾ ಹಸನವ ಬಯಸುತ್ತಾ
ತನ್ನ ಕುಡಿ ಚಿಗುರಲೆಂದು ತಾನೇ ಸೊರಗಿದಳು.

—ಶಂಕರನ ಬಸಪ್ಪ, ಮೈಸೂರು.

# ಸರ್ಪಗಂಧ!

○ ಕೌಂಡಿನ್ಯ

ಧಾರಾವಾಹಿ-3

ಇಲ್ಲಿಯವರೆಗೆ...............

ರೇವತಿಗೆ ಸಂದರ್ಶನದ ಕರೆ ಬರುತ್ತದೆ. ಅವಳು ಮಾರನೆಯ ದಿನ ಪ್ರಯಾಣ ಪ್ರಾರಂಭಿಸುತ್ತಾಳೆ. ಬಸ್ಸಿನಲ್ಲಿ ಸಹ ಪ್ರಯಾಣಿಕರು ಅವಳನ್ನು ಹೆದರಿಸುತ್ತಾರೆ. ಶ್ರೀಮಂತ ಮನೆತನದ ಮಹಾಲಿಂಗ ಮಹಾ ಕ್ರೂರಿ ..ವಿಷ ಸರ್ಪದಂತೆ ಎಂದು ತಿಳಿಸುತ್ತಾರೆ. ರೇವತಿ ಸಂಪಿಗೆ ಪುರಕ್ಕೆ ಬರುತ್ತಾಳೆ.

ಮುಂದೆ ಓದಿ...........

ಸಂಪಿಗೆ ಪುರ!

ಸುತ್ತಲೂ ಗುಡ್ಡಗಳಿಂದ, ಕಡಿದಾದ ಕಾಡಿನ ಬೃಹದಾಕಾರ ಮರಗಳಿಂದ ಆವರಿಸಿಕೊಂಡಿರುವ ಕುಗ್ರಾಮ!

ಕಾವೇರಿ ನದಿ ಊರಿನ ಸುತ್ತಲೂ ಭೋರ್ಗರೆಯುತ್ತಾ ಹರಿಯುತ್ತಿದ್ದಾಳೆ. ಮೂರು ಕಡೆ ನೀರಿರುವುದರಿಂದ ಇದನ್ನು ದ್ವೀಪ ಎಂದು ಗುರುತಿಸುವಂತೆ ಕಂಡು ಬರುತ್ತಿದೆ!

ಆದರೆ ಇದು ದ್ವೀಪ ಅಲ್ಲ! ಮಳೆಗಾಲದಲ್ಲಿ ಮಾತ್ರ ಹೊಳೆ ತುಂಬಿ ಹರಿದು ಊರಿನ ಸುತ್ತಲೂ ನೀರು ಹರಿದಾರಿಯಲ್ಲಿ ಆವರಿಸಿಕೊಳ್ಳುತ್ತದೆ!

ಈ ಊರಿನಲ್ಲಿ ಐನೂರು ಮನೆಗಳಿವೆ!

ಜನಸಂಖ್ಯೆ ಐದು ಸಾವಿರ ದಾಟಿಲ್ಲ! ಊರಿಗೆ ನಗರದಿಂದ ಬರುವುದು ಒಂದೇ ಒಂದು ಬಸ್ಸು. ಮಧ್ಯಾಹ್ನ ಬಂದು ಹೊರಟು ಹೋದರೆ ಇನ್ನು ಮಾರನೆಯ ದಿನದ ತನಕ ಬಸ್ಸು ಸಿಗುವುದಿಲ್ಲ

ಈ ಊರಿನಲ್ಲಿ ಜನರಿಗೆ ಬೇಕಾಗುವ ಯಾವ ರೀತಿಯ ಸೌಲಭ್ಯಗಳು ಸಹ ಇಲ್ಲ

ಊರಿನವರೂ ಅದಕ್ಕಾಗಿ ಪ್ರಯತ್ನಿಸಲಿಲ್ಲ! ಸಂಪಿಗೆ ಪುರದಂತಹ ಈ ಕುಗ್ರಾಮದಲ್ಲಿ ಹಲವಾರು ಲಕ್ಷಗಳನ್ನು ಹೊಂದಿರುವ ಶ್ರೀಮಂತ ಮನೆತನ ಇದೆ! ಅದೇ ಎಡತೊರೆ ಲಕ್ಷಾಧೀಶ್ವರರ ವಂಶ!

ಇಲ್ಲೊಂದು ಸಂಗತಿ ಇದೆ! ಎಡತೊರೆ ಮನೆಯವರು ವಂಶಪಾರಂಪರವಾಗಿ ಶ್ರೀಮಂತರಲ್ಲ ತೀರ ಇತ್ತೀಚೆಗೆ ದಿಢೀರ್ ಆಗಿ ಶ್ರೀಮಂತರಾಗಿದ್ದಾರೆ

ಅದೊಂದು ನಿಗೂಢ ಸಂಗತಿ! ಜನಗಳು ಅದರ ಬಗ್ಗೆ ಮತ್ತು ಹಲವಾರು ಸಂಗತಿಗಳನ್ನು ನಿಗೂಢತೆಯ ರೋಚಕ ಕತೆಯಂತೆ ಹೇಳುತ್ತಾರೆ.

ಕೆಲವೇ ವರ್ಷಗಳ ಹಿಂದೆ ಈ ವಂಶದ ಬಗ್ಗೆ ಯಾರಿಗೂ ಸರಿಯಾಗಿ ಗೊತ್ತಿ ಇರಲಿಲ್ಲ.

ಇವರು ವಲಸೆ ಬಂದವರಲ್ಲ! ಈ ಕುಗ್ರಾಮದಲ್ಲಿ ಹತ್ತರೊಂದಿಗೆ ಇನ್ನೊಂದು ಎಂಬಂತೆ ಇದ್ದರು ಎಡತೊರೆಯವರು!

ನೆಲದಲ್ಲಿ ಇರುವ ಧೂಳನ್ನೆಲ್ಲಾ ಎಬ್ಬಿಸುತ್ತಾ ಬಸ್ಸು ಸಂಪಿಗೆ ಪುರದ ದೇವಸ್ಥಾನದ ಹತ್ತಿರ ನಿಂತಿತು.

ಅದೇ ಕೊನೆಯ ಸ್ಟಾಪ್! ಧೂಳು ವಿಪರೀತ ಧೂಳು. ಚೆಲುವೆ ರೇವತಿ ಸೂಟ್ ಕೇಸ್ ಅನ್ನು ಎತ್ತಿಕೊಂಡು ನಿಧಾನವಾಗಿ ಕೆಳಗೆ ಇಳಿದಳು

ಬಿಸಿಲಿನ ಧಗೆ ತೀವ್ರವಾಗಿದೆ!

ಬಲದ ಕೈಯಲ್ಲಿ ಸೂಟ್‌ಕೇಸು, ಎಡದ ಕೈಯಲ್ಲಿ ಬಣ್ಣದ ಕೊಡೆ ಹಿಡಿದು ಹೈ ಹೀಲ್ಡ್ ಸ್ಲಿಪ್ಪರ್‌ನ ಬಳುಕು ನಡಿಗೆಯೊಂದಿಗೆ ಊರಿನಲ್ಲಿ ನಡೆಯುತ್ತಿದ್ದಾಳೆ ಚೆಲುವೆ!

ಬಿಸಿಲಲ್ಲಿ ಬೆಳದಿಂಗಳು! ಅಂಗಡಿಗಳ ಮುಂದೆ, ಕ್ಷೌರದ ಅಂಗಡಿಯ ಹತ್ತಿರ ಮತ್ತು ವೀರಭದ್ರೇಶ್ವರ ಕ್ಯಾಂಟೀನಿನ ಹತ್ತಿರ ಜನಗಳು ನಿಂತುಕೊಂಡು ಬೆಕ್ಕಸ ಬೆರಗಾಗಿ, ಕಣ್ಣರಳಿಸಿ ನೋಡುತ್ತಿದ್ದಾರೆ

ಆಹಾ ..ಎಂತಹ ಸೌಂದರ್ಯ!

ಸಿನಿಮಾದವಳೇ ಇರಬೇಕು! ಬಳುಕುತ್ತಾ ನಡೆದ ಈ ಚೆಲುವೆಯ ಹಿಂದೆ ಹಳ್ಳಿಯ ಹತ್ತಾರು ಮಂದಿ ಬರುತ್ತಿದ್ದಾರೆ ಎಡತೊರೆ ಬಂಗಲೆಯನ್ನು ತೋರಿಸಲು! ಸಡಗರವೋ ಸಡಗರ ಅವರಿಗೆ!

ಆ ಊರಿನಲ್ಲಿ ಎತ್ತ ನೋಡಿದರೂ ನಾಡ ಹಂಚಿನ ಮನೆಗಳೇ ಜಾಸ್ತಿ. ಆದರೆ ಕುಸು ಎತ್ತರದ ಸ್ಥಳದಲ್ಲಿ ಕಂಡು ಬಂದ ಬಂಗಲೆ! ಆಧುನಿಕ ಬಂಗಲೆ!

ರೇವತಿ ಕಣ್ಣರಳಿಸಿ ನೋಡಿದಳು! ನಗರದ ಹೆಣ್ಣಿಗೆ ಬಂಗಲೆ ಹೊಸದಲ್ಲ. ಆದರೆ ಅಂತಹ ಕುಗ್ರಾಮದಲ್ಲಿ ಇಂತಹ ಮಾಡರ್ನ್ ಬಂಗಲೆ ಕಂಡು ಅವಳಿಗೆ ಅತ್ಯಾಶ್ಚರ್ಯ ಉಂಟಾಗಿತ್ತು

ನಕ್ಷತ್ರ ಆಕಾರದ ಬಂಗಲೆ! ಸುತ್ತಲೂ ಕಾಂಪೌಂಡು ಹಾಕಲಾಗಿತ್ತು. ಮುಂಭಾಗದಲ್ಲಿ ಎರಡು ತೆಂಗಿನ ಮರಗಳು. ಒಳಭಾಗದಲ್ಲಿ ಕಂಡುಬರುತ್ತಿದ್ದ ವಿವಿಧ ರೀತಿಯ ಹೂವಿನ ಗಿಡಗಳು!

ಒಳಗಡೆ ಒಂದು ಜೀಪು, ಕಾರು ಮತ್ತು ಬೈಕ್ ನಿಂತಿದೆ. ಇಬ್ಬರು ಆಳುಗಳು ತೋಟದಲ್ಲಿ ಕೆಲಸ ಮಾಡುತ್ತಿದ್ದಾರೆ.

ಗೇಟಿನ ಹತ್ತಿರ ಗೂರ್ಖ!

ಇವಳು ಸೂಟ್‌ಕೇಸ್ ಅನ್ನು ನೆಲದ ಮೇಲೆ ಇರಿಸಿ ತನ್ನ ವ್ಯಾನಿಟಿ ಬ್ಯಾಗ್‌ನಿಂದ ಕಾರ್ಡ್ ಅನ್ನು ತೆಗೆದು ನೀಡಿದಳು. ಈಗ ಗೂರ್ಖ ಬಂಗಲೆಯ ಒಳಗೆ ಹೋಗಿ ಎರಡು ನಿಮಿಷಗಳ ನಂತರ ಹಿಂತಿರುಗಿ

ಬಂದು ಹೂಂ...ಹೋಗಿ ಎಂದು ಗೇಟನ್ನು ತೆರೆದು ದೂರ ನಿಂತನು.

ರೇವತಿ ಒಳಗೆ ಪ್ರವೇಶಿಸಿದಳು.

ರೇವತಿಯ ಕಣ್ಣುಗಳು ಅರಳಿತು ! ಬಂಗಲೆಯ ಹಾಲ್‌ನ ದೃಶ್ಯ ! ಅಲ್ಲಿನ ಸೆಟ್ಟಿಂಗ್ ಯಾವುದೋ ಸಿನಿಮಾದ ದೃಶ್ಯದಂತೆ ಕಂಡು ಬರುತ್ತಿದೆ

ಅಲ್ಲಿ ಇಂತದ್ದು ಇಲ್ಲ ಅನ್ನುವಂತೆ ಇಲ್ಲ! ಹಾಲ್‌ನಲ್ಲಿ ಇರುವ ಸೋಫಾದಲ್ಲಿ ರೇವತಿ ಕುಳಿತು ಸುತ್ತಲೂ ನೋಡುತ್ತಿರುವಾಗಲೇ ರೂಮಿನಿಂದ ಯಾರೋ ಇಣುಕಿ ನೋಡಿದರು.

ರೇವತಿ ಆ ಮುಖ ಕಂಡಳು ! ತಲೆಯ ಕೂದಲು, ಗಡ್ಡವೆಲ್ಲಾ ಬೆಳ್ಳಗಾಗಿದ್ದ ಮುಖ ! ಕಣ್ಣುಗಳು ಆಳಕ್ಕೆ ಇಳಿದಿತ್ತು. ದಪ್ಪನೆಯ ಮೂಗು !

ಪಿಳಿಪಿಳಿ ಕಣ್ಣು ಬಿಡುತ್ತಿದ್ದಾನೆ ಮುದುಕ ! ರೂಮಿನಿಂದ ಹೊರಗೆ ಬರಲೇ ಇಲ್ಲ. ಸೋಫಾದಲ್ಲಿ ಕುಳಿತಿರುವ ರೇವತಿಯನ್ನು ನುಂಗುವಂತೆ ನೋಡುತ್ತಿದ್ದಾನೆ !

ಮಹಡಿಯ ಮೇಲೆ ಹೆಜ್ಜೆ ಶಬ್ದ !

ಮೂವರು ಇಳಿದು ಬರುತ್ತಿದ್ದಾರೆ. ಇಬ್ಬರು ಗಂಡಸರು ಮತ್ತು ಒಬ್ಬಾಕೆ ಹೆಂಗಸು ! ಅವಳೇನು ಚೆಲುವೆಯಲ್ಲ !

ಮುವತ್ತೆಂಟರ ಪ್ರಾಯ ಆಕೆಗೆ !

ದಢೂತಿ ದೇಹ ! ಮೈಕುಂಬ ಚಿನ್ನದ ಆಭರಣಗಳನ್ನು ಪೇರಿಸಿಕೊಂಡಿದ್ದಾಳೆ. ಕಲಾಪತಿನ ಜೊಡ್ಡ ರೇಶಿಮೆ ಸೀರೆ ಉಟ್ಟಿದ್ದಾಳೆ !

ಶ್ರೀಮಂತಿಕೆ ದರ್ಪ ಕಂಡು ಬರುತ್ತಿದೆ! ಅವಳೇ ಅರುಂಧತಿ !

ಇನ್ನಿಬ್ಬರು ತಮಿಳು ಸಿನಿಮಾಗಳಲ್ಲಿ ಬರುವ ಖಳನಾಯಕರಂತೆ ಕಂಡುಬರುತ್ತಿದ್ದಾರೆ. ಚಿನ್ನದ ಸರ ಕುತ್ತಿಗೆಯಲ್ಲಿದೆ. ಬೆರಳುಗಳಲ್ಲಿ ಉಂಗುರಗಳು ! ಇಬ್ಬರೂ ಉದ್ದನೆಯ ಕಪ್ಪು ಬಣ್ಣದ ಕೋಟನ್ನು ಹಾಕಿಕೊಂಡಿದ್ದಾರೆ. ರೇಶಿಮೆ ಪಂಚೆ !

ತಲೆಯಲ್ಲಿ ಮೈಸೂರಿನ ರುಮಾಲು !

ಹೆಗಲಿನ ಮೇಲೆ ಪಟ್ಟೆ ಶಲ್ಯ !

ಅವರೇ ವೀರಭದ್ರ...ಲಿಂಗಯ್ಯ !

ಪರಮಾಶ್ಚರ್ಯವೆಂದರೆ ಅವರ್‍ಯಾರು ಮಾತಾಡುತ್ತಿಲ್ಲ. ಪಿಳಿಪಿಳಿ ಕಣ್ಣು ಬಿಡುತ್ತಿದ್ದಾರೆ. ಕೀ ಕೊಟ್ಟ ಗೊಂಬೆಯಂತೆ ಮಹಡಿಯ ಮೇಲಿನಿಂದ ಬಂದು ಸೋಫಾದಲ್ಲಿ ಕುಳಿತಿದ್ದಾರೆ.

ಇವರಿಬ್ಬರಲ್ಲಿ ಮದುವೆ ಗಂಡು ಯಾರು? ರೇವತಿಗೆ ನಗು ಬರುತ್ತಿದೆ !

ಈ ಕೋಡಂಗಿಗಳನ್ನು ಮದುವೆಯಾಗಬೇಕೆ ! ಇದ್ದಿದ್ದರಲ್ಲಿ ಶ್ರೀಮಂತಿಕೆಯ ಗತ್ತಿನಿಂದ ಕುಳಿತಿದ್ದವಳು ಎಂದರೆ ಅರುಂಧತಿ ಮಾತ್ರ !

ಅವಳ ನೋಟದಲ್ಲಿ ತೀಕ್ಷ್ಣತೆ ಇತ್ತು ! ಉಳಿದವರಂತೆ ಕೀ ಕೊಟ್ಟಿರುವ ಗೊಂಬೆ ಅಲ್ಲ !

ರೂಮಿನ ಬಾಗಿಲು ತೆರೆಯಿತು !

ಬಂದನು . ಬಂದನು ಅವನು !

ರೇವತಿಯ ಕಣ್ಣುಗಳು ಅರಳಿತು ! ?

[ಮುಂದುವರೆಯುತ್ತದೆ]

## ರೋಹಿಣಿ ಎಂಬ ಹುಡುಗಿ

ನಿನ್ನೆ ಮೊನ್ನೆ ಅನ್ನೋ ಹಾಗೇ ಇದೆ...ದಿಢೀರನೆ ನಾನು ಕೆಲಸ ಮಾಡುವ ಆಫೀಸಿಗೆ 3-4 ಜನ ನುಗ್ಗಿದ್ದರು. ಅದು ಬೇರಾರೂ ಅಲ್ಲ ನನ್ನ ಗೆಳತಿ ರೋಹಿಣಿಯ ಅಕ್ಕ-ಭಾವಂದಿರು.

'ನೀನಿಲ್ಲೇ ಕೆಲಸ ಮಾಡ್ತಿದ್ದೀಯಾ ?' ಸ್ನೇಹದಿಂದ ಅಪ್ಪಿಕೊಂಡಿದ್ದಳು. 'ಬರುವ ವಾರ ನನ್ನ ಮದುವೆ ಖಂಡಿತಾ ಬಾ. ಇಲ್ಲಿ ಒಳ್ಳೇ ಬಟ್ಟೆ ಶಾಪ್ ಎಲ್ಲಿದೆ ? ಬಟ್ಟೆ ತೆಗೆಯಲು ಬಂದಿದ್ದೇವೆ.' ಅವಳಕ್ಕನೊಡನೆ ಆತ್ಮೀಯ ಆಹ್ವಾನವಿತ್ತಿದ್ದು ಇನ್ನೂ ನಿನ್ನೆಯಷ್ಟು ಹಸಿರಾಗಿದೆ.

10 ವರುಷಗಳ ಹಿಂದೆ...ಇದೇ ಹುಡುಗಿ ರೋಹಿಣಿ– ಸ್ಕೂಲು ಬಿಟ್ಟು 4-6 ವರ್ಷವಾಗಿತ್ತು.

'ನೀನು ರೇಣುಕಾನ ತಂಗೀನಾ ? ಅವಳ ಹಾಗೆ ಇದ್ದೀಯಾ ? ಎಂದು ಇಷ್ಟಗಲ ಕಣ್ಣು ಬಿಟ್ಟು ಕೇಳಿದ್ದಳು. 'ನಾನೇ ರೇಣುಕಾ ಮರೆತು ಹೋಯ್ತಾ ?' ನಾನೂ ಅವಳನ್ನು ಅಚ್ಚರಿಗೊಳಿಸಿದ್ದೆ.

ಎಲ್ಲಾ ಹಸಿ ಹಸಿ ನೆನಪು ರೋಹಿಣಿ ಎಂಬ ಮುದ್ದು, ಮುಗ್ಧ ಹುಡುಗಿ ನನ್ನ ಸಹಪಾಠಿ. ನನ್ನ ಒಂದೆರಡು ಹಾಸ್ಯ ಲೇಖನಗಳಲ್ಲಿ ಅವಳ ವ್ಯಾಖ್ಯಾನ ನೀಡಿದ್ದೆ. ಅವಳ ಮಾತುಗಳನ್ನು ಸೇರಿಸಿದ್ದೆ. ಮದುವೆಗೆ ಕರೆದಾಗ, ಮೈಸೂರು– ತಣ್ಣಿಮಾನಿ ಗ್ರಾಮ ತೀರ ಹತ್ತಿರವೆಂಬಂತೆ ಸಂತಸದಿಂದ ಆಗಾಗ ಸಿಕ್ತಾ ಇರು ಎಂದಿದ್ದೆ. ಅವಳ ಮದುವೆಗೆ ಹೋಗಲಾಗಲಿಲ್ಲ. ಟೆಲಿಗ್ರಾಂ ಕಳಿಸಿದ್ದೆ. ನಾನೆಂದೂ ನೋಡಿದ್ದ ಅವಳ ಪತಿಯೊಡನೆ ಅವಳನ್ನು ಹೋಲಿಸಿ ಖುಷಿಪಟ್ಟೆ. ಆದರೆ ವಿಧಿ ಎಷ್ಟು ಕ್ರೂರವಾಗಿ ಆ ಕನಸುಗಳನ್ನು ಕೊಂದುಬಿಟ್ಟ !

'ಜೀವನದ ನಾಟಕ ರಂಗದಲ್ಲಿ ನಾವೆಲ್ಲಾ ನಟರು. ಪಾತ್ರ ಮುಗಿದ್ದೊಡನೆ ಬೇಗ ಪರದೆಯ ಹಿಂದೆ ಹೋಗ್ತೀವಿ. ನಮ್ಮ ಕರ್ಮ ಸವೆದ ಮೇಲೆ ಒಂದೇ ಒಂದು ನಿಮಿಷವೂ ಇಲ್ಲಿರುವಂತಿಲ್ಲ. ಎಲ್ಲೋ ಓದಿದ ನೆನಪು. ಹಾಗೇ ಆ ಮುದ್ದು ರೋಹಿಣಿಯ ಹಣೆಯಲ್ಲಿ ವಿಧಿ ಪುಟ್ಟ ಪಾತ್ರವೊಂದನ್ನೇ ಬರೆದಿದ್ದಿರಬೇಕು. ಆವನೂ ಸ್ವಾರ್ಥಿ. ಸುಂದರವಾದದ್ದೆಲ್ಲಾ ತನ್ನ ಬಳಿಯಿರಲಿ ಎಂದೇ ಬೇಗ ಅವಳನ್ನು ಕರೆಸಿಕೊಂಡ ಎಂದು ನೆನಪಿಸಿಕೊಂಡರೂ ಗಂಟಲಿನಲ್ಲಿ ಕಡುಬು ಸಿಕ್ಕಿಕೊಂಡಂತೇ ದುಗುಡ.

[ 12ನೇ ಪುಟ ನೋಡಿ ]

ಟೀಕೆ—ಟಿಪ್ಪಣಿ

## ಕುಶಾಲನಗರದ ಅವಲೋಕನಕ್ಕೆ—ಪ್ರತಿಕ್ರಿಯೆ

ಮಾನ್ಯರೇ, ಕೊಡಗು ಸಂಗಾತಿ ಸಂಚಿಕೆ 6ರಲ್ಲಿ ಪ್ರಕಟವಾದ "ಕುಶಾಲನಗರದಲ್ಲಿ ಗೌಡರ ಸಂತೋಷ ಕೂಟದ ಒಂದು ಅವಲೋಕನ" ಕ್ಕೆ ಪ್ರತಿಕ್ರಿಯೆ ಆಗಿ—ಸುಮಾರು ಏಳೆಂಟು ವರ್ಷದ ಹಿಂದೆ ಈ ಕೂಟಕ್ಕೆ 100 ರಿಂದ 150 ಜನರು ಮಾತ್ರ ಸೇರುವ ಸಮಾರಂಭಕ್ಕೆ ಇಂದು 800 ರಿಂದ 850 ಜನರು ಸೇರಲು ಇದರ ಹಿಂದೆ ಯುವಕರ ಒಂದು ತಂಡದ ಒಂದು ತಿಂಗಳ ಪರಿಶ್ರಮವಿದೆಯೆಂದು ತಿಳಿಯಬೇಕು. ಇದರಲ್ಲಿಯೂ ಶೇ. 5 ರಷ್ಟು ಜನರಿಗೆ ಆಹ್ವಾನ ಪತ್ರಿಕೆ ಸಿಗದೆ ನೊಂದುಕೊಂಡವರು ಇದ್ದಾರೆ

ಕುಶಾಲನಗರ ಗೌಡ ಸಮಾಜದ ಸಭಾಂಗಣದ ಒಳಗಡೆ ಸುಮಾರು 450ರಿಂದ 500 ಜನರು ಮಾತ್ರ ಕುಳಿತುಕೊಳ್ಳಲು ಅವಕಾಶವಿದೆ. ಅಂದಿನ ಜನ ಸಮೂಹದಲ್ಲಿ ಸುಮಾರು 300 ರಿಂದ 400 ಜನರು ಕಾರ್ಯಕ್ರಮವನ್ನು ಹೊರಗಿನಿಂದಲೇ ವೀಕ್ಷಿಸಿದರೆ ಅದು ಅಶಿಸ್ತು ಹೇಗಾದಿತು ? ಜನಾಂಗದವರಿಂದಲೇ ವಂತಿಕೆ ಸಂಗ್ರಹಿಸಿ ಅವರಿಂದಲೇ ಏರ್ಪಡಿಸಿದ ಸಂತೋಷ ಕೂಟದಲ್ಲಿ ಅತೀ ಗಣ್ಯರು ಯಾರು? ಎಲ್ಲರನ್ನು ಮೊದಲ ಸೀಟಿನಲ್ಲಿ ಕೂರಿಸುವುದಾದರು ಹೇಗೆ? ಸಮಿತಿಯವರು ಕೇವಲ ಇಬ್ಬರನ್ನು ಮಾತ್ರ ಅತಿಥಿಗಳಾಗಿ ಆಹ್ವಾನಿಸಿದ್ದರು. ಅವರು ಎಲ್ಲರಿಗೂ ತಿಳಿದಂತೆ ವೇದಿಕೆಯಲ್ಲಿ ಆಸೀನರಾಗಿದ್ದರು.

ಇದೇ ಕೂಟವನ್ನು ಏರ್ಪಡಿಸಲು ಗೌಡ ಸಮಾಜದವರು ಹಲವು ಕಾರಣದಿಂದ ಹಿಂದೇಟು ಹಾಕಿರುವಾಗ ಯುವಕರು ಕೆಲವು ಹಿರಿಯರ ಸಹಕಾರದಿಂದ ಜನಾಂಗ ಬಾಂಧವರಿಂದಲೂ ಮುಖ್ಯ ಅತಿಥಿಗಳಿಂದಲೂ ಮೆಚ್ಚುಗೆ ಪಡುವಂತಹ ಕಾರ್ಯಕ್ರಮವನ್ನು ಏರ್ಪಡಿಸಿರುವಾಗ ಯುವಕರನ್ನು ಪ್ರೋತ್ಸಾಹಿಸುವ ಬದಲು, ಇಂತಹ ಲೇಖನಗಳನ್ನು ಪತ್ರಿಕೆಗೆ ಕೊಡುವುದು ತರವಲ್ಲ. ಇನ್ನು ಮುಂದಕ್ಕೆ ಲೇಖನ ಕಳುಹಿಸಿದ ಶ್ರೀಯುತರು ಮುಂಬರುವ ಸಂತೋಷಕೂಟದಲ್ಲಿ ನೇತೃತ್ವ ವಹಿಸಿ ನಡೆಸಿ ಕೊಡುವರೆ? —ಕುಂಭಗೌಡನ ಸೋಮಣ್ಣ, ಕುಶಾಲನಗರ

---

[ 4ನೇ ಪುಟದಿಂದ ]

ಇವರು ಖ್ಯಾತ ಸಾಹಿತಿ, ಪ್ರೊಫೆಸರ್, ವಕೀಲರಾದ ಶ್ರೀ ಪೂಜಾರಿರ ಮೊಣ್ಣಪ್ಪನವರ ಧರ್ಮಪತ್ನಿಯಾಗಿದ್ದಾರೆ. ಇವರು ನಮ್ಮ ಕೊಡಗು ಅರೆಭಾಷಿಕ ಗೌಡ ಜನಾಂಗದ ಸ್ನಾತಕೋತ್ತರ ಪದವಿ ಪಡೆದ ಪ್ರಥಮ ಮಹಿಳೆಯೂ ಹೌದು

ಇವರ ಪ್ರಥಮ ಪುತ್ರ ಪಾಪಯ್ಯನವರು ಪದವೀಧರರಾಗಿ ತಹಸೀಲ್ದಾರರಾಗಿ ನಿವೃತ್ತಿ ಹೊಂದಿದ್ದಾರೆ. ನಿವೃತ್ತಿ ನಂತರ ಕರ್ನಾಟಕ ಸ್ಟೇಟ್ ಬಾರ್ ಕೌನ್ಸಿಲ್‌ನ ಸದಸ್ಯರು ಅಲ್ಲದೆ ಟಾಟಾ ಕೈಗಾರಿಕಾ ಸಂಸ್ಥೆಯಲ್ಲಿ ಬೆಂಗಳೂರು ಅಂತರಾಷ್ಟ್ರೀಯ ವಿಮಾನ ನಿಲ್ದಾಣದ ಯೋಜನೆಯ ಭೂಸ್ವಾಧೀನ ಸಮನ್ವಯ ಅಧಿಕಾರಿಯಾಗಿ ಈಗ ಸೇವೆ ಸಲ್ಲಿಸುತ್ತಿದ್ದಾರೆ ಎರಡನೆ ಪುತ್ರ ಭರತ್‌ರವರು ಬಿ ಇ , ಎಂ ಐ ಇ ಕರ್ನಾಟಕ ಲೋಕೋಪಯೋಗಿ ಇಲಾಖೆಯಲ್ಲಿ ಮುಖ್ಯ ಇಂಜಿನಿಯರ್ ಆಗಿ ನಿವೃತ್ತರಾಗಿದ್ದಾರೆ. ಇವರು ಸಹ ಕೊಡಗು ಗೌಡ ಅರೆಭಾಷಿಕರಲ್ಲಿ ಪ್ರಥಮ ಮುಖ್ಯ ಇಂಜಿನಿಯರ್ ಸಹ ಹೌದು. ಶ್ರೀಯುತರ ಸೇವೆಯನ್ನು ಗೌಡ ಜನಾಂಗದವರು ಇಷ್ಟರಲ್ಲೇ ಪರಿಗಣಿಸಬೇಕಿತ್ತು. ಕೊನೆಯ ಪುತ್ರ ರಾಮಕೃಷ್ಣರವರು ವೈದ್ಯಾಧಿಕಾರಿಯಾಗಿ 30 ವರ್ಷಗಳ ಕಾಲ ಗ್ರಾಮೀಣ ಪ್ರದೇಶಗಳಲ್ಲಿಯೇ ಸರ್ಕಾರದ ವೈದ್ಯರಾಗಿ ಸೇವೆ ಸಲ್ಲಿಸಿದ್ದು, ಈಗ ಮೈಸೂರು ನಗರದಲ್ಲಿ ಸೇವೆ ಸಲ್ಲಿಸುತ್ತಿದ್ದಾರೆ.

ದ|| ಸಿರಕಜೆ ದೇವಯ್ಯನವರು ನೇರ ನಡೆನುಡಿಯ ಸತ್ಯಸಂಧರಾಗಿ ತಮ್ಮ ಜೀವನದಲ್ಲಿ ಸ್ವಪ್ರಯತ್ನದಿಂದ ಮುಂದೆ ಬಂದು ಯಾರೊಬ್ಬರ ಹಂಗಿಗೆ ಒಳಪಡದೆ ಧೈರ್ಯದಿಂದ ತನ್ನತನವನ್ನು, ಸ್ವಂತಿಕೆಯನ್ನು ಉಳಿಸಿಕೊಂಡು ಶ್ರಮಪಟ್ಟು ದುಡಿದು, ದುಡಿಮೆಯೇ ದೇವರೆಂಬ ಭಾವನೆಯಿಂದ ಪರಿಪೂರ್ಣ ಜೀವನ ನಡೆಸಿ ಯಾವುದೇ ಧನಲಾಭಕ್ಕಾಗಿ ಆಸೆ ಪಡದೆ ತಮ್ಮ ಮುಂದಿನ ಪೀಳಿಗೆಗೆ ಮಾದರಿ ವ್ಯಕ್ತಿಯಾಗಿ ಶಿಸ್ತಿನ ವ್ಯಕ್ತಿಯಾಗಿ 80 ವರ್ಷಗಳ ಕಾಲ ತುಂಬು ಜೀವನ ನಡೆಸಿದ್ದಾರೆ. 1954 ರಿಂದಲೇ ಶ್ರೀ ರಾಮಕೃಷ್ಣ ಪರಮಹಂಸರ, ಸ್ವಾಮಿ ವಿವೇಕಾನಂದರ ತತ್ವಗಳಿಗೆ ಮೆಚ್ಚಿ, ಮೈಸೂರಿನ ರಾಮಕೃಷ್ಣ ಆಶ್ರಮದ ಒಬ್ಬ ಕಟ್ಟಾ ಭಕ್ತನಾಗಿ, ತಮ್ಮ ಪತ್ನಿಯೊಡನೆ ಭಾರತದ ಎಲ್ಲಾ ಪುಣ್ಯ ಕ್ಷೇತ್ರಗಳಿಗೆ ಭೇಟಿಕೊಟ್ಟ ಕೀರ್ತಿ ಇವರದ್ದಾಗಿದೆ ಶ್ರೀಯುತರ ಆದರ್ಶ ಬಾಳುವೆ ಸಮಾಜ ಸೇವೆ ಇಂದಿನ ಯುವ ಪೀಳಿಗೆಗೆ ಮಾರ್ಗದರ್ಶನ ಆಗಿದೆ ಎಂದು ತಿಳಿಸಲು ಸಂಗಾತಿ ಹರ್ಷಿಸುತ್ತದೆ. ●

—ಸಂಗ್ರಹ ಲೇಖನ : ಪಟ್ಟಡ ಪ್ರಭಾಕರ್

---

[11ನೇ ಪುಟದಿಂದ]

ಇಲ್ಲಿ ಕರ್ಮ ವ್ಯಥೆ ಪಡುವ ನಮ್ಮದೆ, ಬಿಟ್ಟು ಹೋದ ಅವಳದೆ, ಇದೀಗ ಕಣ್ಣು ತೆರೆದ ಆ ಮುದ್ದು ಮಗುವಿನದೇ, ದಿಡೀರನೆ ಬದುಕು ಶೂನ್ಯವಾದ ಅವಳ ಅಮಾಯಕ ಪತಿಯದೇ ಎಂದು ಅರ್ಥವಾಗಲಿಲ್ಲ ಆದರೂ ಅವಳೊಂದು ಸುಂದರ ಕನಸಾದಳಲ್ಲಾ ಎಂಬ ನೋವು ಮನಸ್ಸನ್ನು ಕುಕ್ಕುತ್ತಲೇ ಇದೆ.

[ಕಳೆದ ಜನವರಿ 30ರಂದು ತನ್ನ ಸುಂದರ ಬದುಕಿಗೆ ಇತಿಶ್ರೀ ಹಾಡಿದ ಗೆಳತಿ ರೋಹಿಣಿ ಕುದ್ಪಾಜೆಗೊಂದು ಶ್ರದ್ಧಾಂಜಲಿ.]

—ರೇಣುಕಾ ವಸಂತ್, ಮೈಸೂರು

# ಎಳೆಯ ಜುಗುನ್‌ಗೆ ದ್ವಿಚಕ್ರ ರ್‍ಯಾಲಿಯಲ್ಲಿ ಪ್ರಶಸ್ತಿಯ ಮತ್ತೊಂದು ಗರಿ

ದ್ವಿಚಕ್ರ ರ್‍ಯಾಲಿಯಲ್ಲಿ ಕೊಡಗಿನ ಮತ್ತೊಂದು ಎಳೆಯ ಪ್ರತಿಭೆ ಮೊಳಕೆಯೊಡೆಯುತ್ತಿದೆ. ದ್ವಿಚಕ್ರ ರ್‍ಯಾಲಿಯಲ್ಲಿ ಕೊಡಗಿನ ಪ್ರಸಿದ್ಧ ಜಗತ್ ನಂಜಪ್ಪ ಹಾಗೂ ಅನಿತಾ ನಂಜಪ್ಪ ಅವರ ಹಾದಿಯಲ್ಲಿ ಸಿದ್ದಾಪುರದ ಈ ತರುಣ ಹೆಜ್ಜೆಯನ್ನಿಟ್ಟಿದ್ದಾನೆ. ಈತನೇ ಸಿದ್ದಾಪುರದಲ್ಲಿರುವ ಪೇರಿಯನಮನೆ ಕಾರ್ಯಪ್ಪ ಅವರ ಪುತ್ರ ಜುಗುನ್ ಕಾರ್ಯಪ್ಪ. ಈತ 22ರ ಉತ್ಸಾಹಿ ತರುಣ ಎಂದರೆ ಆಶ್ಚರ್ಯವಾಗುವುದು ಸಹಜವೇ. ವಯಸ್ಸಿನಲ್ಲಿ ಕಿರಿಯನಾದರೂ ಸಾಧನೆಯಲ್ಲಿ ಹಿರಿಮೆಯನ್ನು ತೋರುತ್ತಾ ದಿನದಿಂದ ದಿನಕ್ಕೆ ಸಾಧನೆಯ ಮೆಟ್ಟಿಲನ್ನು ಏರುತ್ತಿದ್ದಾನೆ. ಹಲವಾರು ದ್ವಿಚಕ್ರ ರ್‍ಯಾಲಿಯಲ್ಲಿ ಭಾಗವಹಿಸಿ ಹಿರಿಯರನ್ನು ಹಿಂದಿಕ್ಕಿ ಪ್ರತಿಷ್ಠಿತ ಪ್ರಶಸ್ತಿಗಳನ್ನು ಎತ್ತಿಹಿಡಿದಿದ್ದಾನೆ.

1996 ರಂದು ಗೋಣಿಕೊಪ್ಪಲುವಿನಲ್ಲಿ ಕಾವೇರಿ ದಸರಾ ಸಮಿತಿಯ ವತಿಯಿಂದ ಜರುಗಿದ 'ಆ್ಯಕ್ಷನ್–200' ದ್ವಿಚಕ್ರ ವಾಹನ ರ್‍ಯಾಲಿಯಲ್ಲಿ ಅದ್ಭುತ ಸಾಧನೆಗೈದು ಮೊದಲಿಗರಾದರು. ವೀರಾಜಪೇಟೆಯಲ್ಲಿ ಟೀಸ್‌ಮೆಸ್ ಇವೆಂಟ್ ಕ್ಲಬ್‌ನ ವತಿಯಿಂದ ನಡೆದ 'ಹಿಲ್ ಕ್ಲೈಂಬಿಂಗ್' ಎಂಬ ರೋಮಾಂಚನಕಾರಿಯಾದ ಬೈಕ್ ರೇಸ್‌ನಲ್ಲಿ ಅದ್ಭುತ ಸಾಹಸ ಮೆರೆದ ಜುಗುನ್ ಕಾರ್ಯಪ್ಪ ಅವರು ಮೊದಲಿಗರಾಗಿ ಗುರಿಮುಟ್ಟಿದ್ದಾನೆ. ವೀರಾಜಪೇಟೆಯಲ್ಲಿ 15–9–97ರಂದು ಸಂಕದ ಕಟ್ಟೆ ಕೆರೆಯ ಬಳಿಯಿಂದ ಜೊರಟು ಈಶ್ವರ ದೇವಸ್ಥಾನದ ತನಕ ಬೆಟ್ಟವನ್ನು ಏರಬೇಕಾಗಿತ್ತು. ಈ ಮಾರ್ಗದ ಅಂತರ ನಾಲ್ಕೂವರೆ ಕಿ. ಮೀ. ಆದರೂ ದಾರಿ ಮಾತ್ರ ದುರ್ಗಮವಾಗಿತ್ತು. ಮಣ್ಣು, ಕಲ್ಲು, ದಿಣ್ಣೆಯನ್ನು ಹತ್ತಿ ಚಲಿಸಬೇಕಿತ್ತು. ಸವಾರ ಸ್ವಲ್ಪ ಎಚ್ಚರ ತಪ್ಪಿದರೂ ಭಾರಿ ಅನಾಹುತವಾಗುವ ಅಪಾಯ ಬೇರೆ. ಇದರಲ್ಲಿ ಒಟ್ಟು ಹತ್ತೊಂಬತ್ತು ದ್ವಿಚಕ್ರವಾಹನಗಳು ಪಾಲ್ಗೊಂಡಿದ್ದವು ಆದರೆ ಇದರಲ್ಲಿ ಅಂಜಿಕೆಯಿಲ್ಲದೆ ಗಂಡಸುತನ ತೋರಿದ ಜುಗುನ್ ಕಾರ್ಯಪ್ಪ ಕೇವಲ ನಾಲ್ಕು ನಿಮಿಷ ಮೂರು ಸೆಕೆಂಡ್‌ಗಳಲ್ಲಿ ಗುರಿ ಮುಟ್ಟಿ ಪ್ರಥಮರಲ್ಲಿ ಪ್ರಥಮರಾದರು. ಇದರೊಂದಿಗೆ ತನ್ನ ಸಾಧನೆಗೆ ಮತ್ತೊಂದು ಗರಿ ಮೂಡಿಸಿಕೊಂಡ ಜುಗುನ್ 1996 ರಲ್ಲಿ ಗೋಣಿಕೊಪ್ಪಲುವಿನಲ್ಲಿ ದಸರಾ ಹಬ್ಬದ ಪ್ರಯುಕ್ತ ನಡೆದ ರ್‍ಯಾಲಿಯಲ್ಲೂ ಮೊದಲಿಗರಾಗಿ ಭವಿಷ್ಯದಲ್ಲಿ ಉತ್ತಮ ಸಾಧನೆ ತೋರುವ ಕುರುಹು ತೋರಿದನು. ಅದೇ ವರ್ಷ ಮೈಸೂರಿನ ಇ ಎಲ್. ಎಫ್. ಆಯಿಲ್ ಕಂಪನಿಯ ವತಿಯಿಂದ ಜರುಗಿದ ಸ್ಪೀಡ್‌ರೇಸ್‌ನಲ್ಲಿ ದ್ವಿತೀಯ ಪ್ರಶಸ್ತಿ ಪಡೆದುಕೊಂಡರು. ಕಳೆದ ವರ್ಷದ ಆರಂಭದಲ್ಲಿ ಇದೇ ಕಂಪನಿಯಿಂದ ನಡೆದ ಸ್ಪೀಡ್‌ರೇಸ್ ಹಾಗೂ ಹಿಲ್ ಕ್ಲೈಂಬಿಂಗ್ ರೇಸ್‌ನ ಹಲವು ವಿಭಾಗಗಳಲ್ಲಿ ಸ್ಪರ್ಧಿಸಿ ಎರಡು ಪ್ರಥಮ ಹಾಗೂ ಎರಡು ದ್ವಿತೀಯ ಸ್ಥಾನ ಪಡೆದುಕೊಂಡ ಕೀರ್ತಿ ಈತನದು. ಅಲ್ಲದೆ ಚಿಕ್ಕಮಗಳೂರಿನಲ್ಲಿ ಎ ಬಿ ಸಿ ಕಾಫಿ ರ್‍ಯಾಲಿಯ 200 ಕಿ.ಮೀ. ರ್‍ಯಾಲಿಯಲ್ಲಿ ಭಾಗವಹಿಸಿ ಕೊನೆಯ ಸುತ್ತಿನ ತನಕ ಮೊದಲಿಗರಾಗಿದ್ದರು. ಆದರೆ ಇನ್ನೇನು ವಿಜಯದ ಹೊಸ್ತಿಲು ತುಳಿಯಬೇಕೆನ್ನುವಷ್ಟರಲ್ಲಿ ಎಕ್ಸಿಲೇಟರ್ ತಂತಿ ತುಂಡಾದಾಗ ಅನಿವಾರ್ಯವಾಗಿ ಸ್ಪರ್ಧೆಯಿಂದ ಹಿಂದೆ ಸರಿಯಬೇಕಾಯಿತು. ಆದರೆ ಛಲಬಿಡದ ತ್ರಿವಿಕ್ರಮ ಜುಗುನ್ ಮುಂದಿನ ತಿಂಗಳ ಚಿಕ್ಕಮಗಳೂರಿನಲ್ಲಿ ಅದೇ ಸಂಘದ ಸ್ಪರ್ಧೆಯಲ್ಲಿ ಭಾಗವಹಿಸಿ ಪ್ರಶಸ್ತಿಯನ್ನು ತನ್ನದಾಗಿಸಿಕೊಂಡಿದ್ದಾನೆ. ಬೈಕ್‌ನಲ್ಲಿ ಅಭ್ಯಾಸದ ವೇಳೆ ಸುಮಾರು 20 ಬಾರಿ ಬಿದ್ದು ಗಾಯ ಏಟುಗಳಾಗಿದ್ದರು ತನ್ನ ಛಲ ಬಿಡಲಿಲ್ಲ. ಒಂದು ಬಾರಿ ಕರಡಿಗೋಡು ರಸ್ತೆಯಲ್ಲಿ ವೇಗವಾಗಿ ತೆರಳುವ ಸಂದರ್ಭ ಮುಂಬದಿಯ ಟಯರ್ ಒಡೆದು ಬೈಕ್‌ನಿಂದ ದೂರ ಹಾರಿ, ತೀವ್ರ ಗಾಯಗಳಾದಾಗ ಹಿತೈಷಿಗಳು ಬುದ್ಧಿವಾದ ಹೇಳಿ, ಬೈಕ್ ಸವಾರಿ ನಿಲ್ಲಿಸುವಂತೆ ಸಲಹೆಯಿತ್ತರು. ಆದರೆ ಇದ್ಯಾವುದಕ್ಕೂ ಸೊಪ್ಪು ಹಾಕದೆ



ಜಗ್ಗದ ಜುಗುನ್ ತನ್ನದೇ ಆದ ವಿಶಿಷ್ಟ ಹಾದಿಯಲ್ಲಿ ಮುನ್ನಡೆಯುತ್ತಿದ್ದಾನೆ.

ಬೈಕ್‌ನ ಮೇಲೆ ಹಲವು ಕಸರತ್ತು ಮಾಡುತ್ತಾನೆ. ನಿಂತಲ್ಲೇ ಒಂದು ಸುತ್ತು ಬೊಯ್ಯ ಬೊಯ್ಯನೆ ತಿರುಗಿಸಿದರೆ, ಹಿಂಬದಿಯ ಒಂದೇ ಚಕ್ರದಲ್ಲಿ ಸುಮಾರು ದೂರ ತೆರಳಿ ಸಾಧಿಸುವ ಗುರಿಯತ್ತ ದಾಪುಗಾಲಿಕ್ಕುತ್ತಿದ್ದಾನೆ.

ಜುಗುನ್ ತನ್ನಲ್ಲಿರುವ ಛಲ, ಉತ್ಸಾಹಕ್ಕೆ ತಂದೆಯ ಪ್ರೋತ್ಸಾಹವೇ ಕಾರಣವೆನ್ನುತ್ತಾನೆ. ಪೋಷಕರು ಇಂತಹದಕ್ಕೆ ಪ್ರೋತ್ಸಾಹ ಕೊಡುವುದು ಅಪರೂಪ. ಆದರೆ ಕಾರ್ಯಪ್ಪ ಅವರು ತನ್ನ ಬೈಕ್‌ನಲ್ಲಿ ಪುತ್ರ ಬಿದ್ದು ಗಾಯಗೊಂಡಾಗ ಸ್ವತಃ ಚಿಕಿತ್ಸೆ ನಡೆಸಿ ಬೆನ್ನು ತಟ್ಟುತ್ತಾರೆ. ಇದರಿಂದ ಮತ್ತಷ್ಟು ಹುರುಪು ತುಂಬಿಕೊಂಡು ಜುಗುನ್ ಸಾಧನೆಯ ಮಾರ್ಗದಲ್ಲಿ ಹೆಜ್ಜೆ ಇಡುತ್ತಿದ್ದಾನೆ. ಮುಂದೆ ಇವನಿಂದ ಇನ್ನಷ್ಟು ಹೆಚ್ಚಿನ ಸಾಧನೆಯನ್ನು ಕೊಡಗು ಸಂಗಾತಿ ಜನಾಂಗದ ಪರವಾಗಿ ನಿರೀಕ್ಷಿಸುತ್ತದೆ.

ಲೇಖನ : ಅಂಚೆಮನೆ ಸುಧಿ,
ಅಭ್ಯತ್‌ಮಂಗಲ.

## ಗೌಡರ ಹಬ್ಬಗಳು

**ಕಿಡ್ದಾಸ ಹಬ್ಬ :**

ಒಕ್ಕಲು ಆದನಂತರ ಭತ್ತವನ್ನು ಪೂಜಿಸುವ ಹಬ್ಬಕ್ಕೆ, ಕಿಡ್ದಾಸ ಹಬ್ಬವೆಂದು ಹೇಳುವರು. ಇದನ್ನು ತುಳು ತಿಂಗಳ ಪೊನ್ನಿ [ಫೆಬ್ರವರಿ] ತಿಂಗಳಲ್ಲಿ ಆಚರಿಸುವರು. ಈ ಹಬ್ಬವನ್ನು ಮೂರು ದಿನ ಆಚರಿಸುವರು. ಮೊದಲನೆ ದಿನ ಭತ್ತ [ಲಕ್ಷ್ಮಿ] ತನ್ನ ಮನೆಗೆ ಬಂದದ್ದು ಇನ್ನು ಯಾರ ಮನೆಗೂ ಹೋಗಬಾರದೆಂಬ ಭಾವನೆಯಿಂದ ಭತ್ತದ ಕಡಿಕೆಯ ಮೇಲಿರುವ ಭತ್ತದ ರಾಶಿಯ ಮೇಲೆ ಚೋರಿಮರದ ಮುಳ್ಳನ್ನು ಕತ್ತಿ ಮತ್ತು ಕಲ್ಲನ್ನು ಹೇರುತ್ತಾರೆ. ಇದನ್ನು ತಪ್ಪಿಸಿ ಭತ್ತ ಹೋಗುವುದಿಲ್ಲವೆಂಬ ನಂಬಿಕೆ. ಅಲ್ಲದೆ ಈ ರೀತಿ ಭಾರ ಹೇರಿದ ಮೂರು ದಿನಗಳವರೆಗೆ ಅಲ್ಲಿಂದ ಭತ್ತವನ್ನು ತೆಗೆಯಬಾರದು.

ಎರಡನೆಯ ದಿನ ಮನೆ ಮತ್ತು ಅಂಗಳವನ್ನು ಸಾರಿಸಿ ಎಲ್ಲರೂ ಶುಭ್ರವಾದ ಬಟ್ಟೆಯನ್ನು ಧರಿಸಿ, ವಿರಾಮ ಪಡೆಯುವ ದಿನ. ಆ ದಿನ ಕೆಲವರು ಕಾಡು ಪ್ರಾಣಿಗಳ ಬೇಟೆ, ಮೀನಿನ ಬೇಟೆ ಮಾಡುವರು. ಇನ್ನು ಕೆಲವರು ಕೋಳಿ ಜೂಜಿನಲ್ಲಿ ನಿರತರಾಗುವರು.

ಮೂರನೆಯ ದಿನ ಇನ್ನು ಮುಂದೆ ಬೇಸಿಗೆ ಕಾಲ ಬರುವುದರಿಂದ ಭೂಮಿ ತಾಯಿ ತಂಪಾಗಿರಲೆಂದು ಭೂಮಿಗೆ ಎಣ್ಣೆ ಕೊಡಬೇಕೆಂದು ಮನೆಯ ಅಂಗಳವನ್ನು ಸಗಣಿಯಿಂದ ಸಾರಿಸಿ ರಂಗೋಲೆ ಹಾಕಿ ಎಣ್ಣೆ ಹುಯ್ದು ಅಲ್ಲಿ ಮಸಿ ಚೂರನ್ನು ಕತ್ತಿಯನ್ನು ಇಡುವರು. ಇದರಿಂದ ಭೂಮಿ ತಾಯಿ ಇಷ್ಟರ ವರೆಗೆ ಅಶುದ್ಧಳಾದ್ದರಿಂದ ಸ್ನಾನ ಮಾಡಿ ಶುಚಿಯಾಗಿರಲೆಂಬ ಅಭಿಪ್ರಾಯ. ಈ ರೀತಿ ಕಿಡ್ದಾಸ ಹಬ್ಬವನ್ನು ಮೂರು ದಿನ ಸಂತೋಷದಿಂದ ಆಚರಿಸುವರು.

**ಯುಗಾದಿ :**

ಯುಗಾದಿ ಹಬ್ಬವು ಹಿಂದುಗಳಲ್ಲಿ ವರ್ಷದ ಮೊದಲನೆಯ ಹಬ್ಬ. ಗೌಡರು ಯುಗಾದಿ ಹಬ್ಬವನ್ನು ಬಹು ಸಂಭ್ರಮದಿಂದ ಆಚರಿಸುತ್ತಾರೆ.

ಯುಗಾದಿ ಹಬ್ಬದ ದಿನ ಬೆಳಿಗ್ಗೆ ತಮ್ಮ ಮನೆಗಳನ್ನು ಶುಚಿಗೊಳಿಸಿ ರಂಗೋಲೆ ಹಾಕಿ ಮಾವಿನ ಎಲೆಯ ತೋರಣಗಳಿಂದ ಅಲಂಕರಿಸಿ ಸ್ನಾನಮಾಡಿ ಹೊಸ ಬಟ್ಟೆಗಳನ್ನು ಧರಿಸಿ, ಕುಲದೈವವನ್ನು ಪ್ರಾರ್ಥಿಸಿ ಪೂಜಿಸಿ ಹಣ್ಣುಕಾಯಿ ಗಂಧ ಮುಂತಾದ ಪ್ರಸಾದವನ್ನು ಸ್ವೀಕರಿಸಿದ ನಂತರ ಬೇವು ಬೆಲ್ಲವನ್ನು ತಿನ್ನುವರು.

ಹೊಸ ವರ್ಷದಲ್ಲಿ ಸುಖ ದುಃಖ, ಸಿಹಿ ಕಹಿಯು ಸಮ್ಮಿಶ್ರವಾಗಿ ಬರಲೆಂಬ ಭಾವನೆಯಿಂದ ಬೇವು ಬೆಲ್ಲವನ್ನು ಸೇವಿಸುತ್ತಾರೆ.

ಕುಟುಂಬದವರೆಲ್ಲರೂ ಸೇರಿ ಏಕಮನಸ್ಸಿನಿಂದ ಒಂದೇ ಸಭೆಯಲ್ಲಿ ಕುಳಿತು ಭೋಜನ ಮಾಡುವರು. ಆ ದಿನ ಯಾರೂ ಮದ್ಯ ಮಾಂಸವನ್ನು ಸೇವಿಸುವುದಿಲ್ಲ. ಹೆಚ್ಚಾಗಿ ತಾವೇ ಬೆಳೆಸಿದ ಹೊಸ ತರಕಾರಿ ಕಾಯಿ ಪಲ್ಯಗಳನ್ನೇ ಸೇವಿಸುವರು.

ಯುಗಾದಿಯ ದಿನದಂದು ಕುಟುಂಬದ ಹಿರಿಯರು ಹೊಸ ವರ್ಷದ ಫಲ ಆಯವ್ಯಯ, ಜಯಾಪಜಯ, ಭವಿಷ್ಯವನ್ನು ಹೊಸ ಪಂಚಾಂಗದಿಂದ ನೋಡಿ ಕುಟುಂಬದವರೆಲ್ಲರಿಗೂ ತಿಳಿಯಹೇಳುವರು.

ನಂತರ ಊರಿನ ಜನರೆಲ್ಲ ಒಂದೆಡೆ ದೇವಸ್ಥಾನದಲ್ಲಿ ಸೇರಿ ಪೂಜೆ ಸಲ್ಲಿಸಿ ತೆಂಗಿನ ಕಾಯಿಗೆ ಕಲ್ಲು ಹೊಡೆಯುವುದು, ತೆಂಗಿನ ಕಾಯಿಗೆ ಕೋವಿಯಿಂದ ಗುಂಡು ಹೊಡೆಯುವುದು, ಆಟೋಟಗಳ ಸ್ಪರ್ಧೆ, ಸಭೆ ಬಹುಮಾನ ವಿತರಣೆಗಳನ್ನು ಬಹಳ ಉತ್ಸಾಹದಿಂದ ಪ್ರತಿ ವರ್ಷವೂ ಆಚರಿಸುವರು.

**ಬಿಸು ಸಂಕ್ರಮಣ :**

ಗೌಡ ಎಂದರೆ ಭೂಮಿಗೆ ಒಡೆಯ, ನೇಗಿಲಯೋಗಿ, ಒಕ್ಕಲುತನ ಮಾಡುವವರು ಎಂದ ಮೇಲೆ ಪ್ರತಿಯೊಬ್ಬರಿಗೂ ಉಳುವ ಸಮಯ ನಿರೀಕ್ಷಣೆ, ಹುರುಪಿನಿಂದ ಉಳುವುದಕ್ಕೆ ಪ್ರಾರಂಭಿಸುವುದು. ಬಿಸು ಸಂಕ್ರಮಣದ ದಿನದಂದು ಗೌಡರು ಅವರ ಕುಟುಂಬದ ಮನೆಗಳಲ್ಲಿ ಬೆಳಗಿನ ಝಾವದಲ್ಲಿ ಮನೆಯನ್ನು ಶುಚಿಯಾಗಿರಿಸಿ, ಮನೆಯ ಯಜಮಾನ ಭಕ್ತಿಯಿಂದ ಮಣೆಯ ಮೇಲೆ ಮಡಿಯಾದ ಬಿಳಿ ಬಟ್ಟೆಯನ್ನು ಹಾಸಿ ನೆಲ್ಲಕ್ಕಿಯಲ್ಲಿ ದೀಪಿಗೆ ಇಟ್ಟು ಹಾಸಿದ ಮಡಿಯಲ್ಲಿ ಹೊಂಬೆಳಕನ್ನು ಹತ್ತಿಸಿ ಇಡುತ್ತಾರೆ. ಇದರೊಡನೆ ಒಂದು ಬಾಳೆಲೆಯಲ್ಲಿ ಅಕ್ಕಿ, ಹಣ್ಣು, ಕಾಯಿ, ಎಲೆ, ಅಡಿಕೆ, ಹೂಗಳಿಂದ ಶ್ರೀ ಗಣಪತಿಗೆ ಇಡುವರು. ಇನ್ನೊಂದು ಬಾಳೆಲೆಯಲ್ಲಿ ಬೆಳ್ಳಿ ನಾಣ್ಯಗಳು, ಸ್ವರ್ಣ ಗಂಧದ ಕಡ್ಡಿ ಇತ್ಯಾದಿಗಳಿಂದ ಅಲಂಕರಿಸಿ ಪೂಜಿಸುವರು. ನಂತರ ಕುಟುಂಬದ ಸರ್ವರೂ ದೇವರನ್ನು ಪ್ರಾರ್ಥಿಸಿ ಅಕ್ಕಿ ಹಾಕಿ ಕೈ ಮುಗಿದು ತಮ್ಮ ಕೆಲಸ ಕಾರ್ಯಗಳನ್ನು ಪ್ರಾರಂಭಿಸುವರು. ಇದಕ್ಕೆ "ಖಣಿ ಪೂಜೆ" ಅಥವಾ ಖಜೆಗೆ ಇಡುವುದೆಂದು ಹೆಸರು.

ನಂತರ ನೇಗಿಲು ನೊಗ ಎತ್ತುಗಳನ್ನು ಗದ್ದೆಗೆ ಕೊಂಡು ಹೋಗಿ ಅಲ್ಲಿ ಶಾಸ್ತ್ರೋಕ್ತವಾಗಿ ಕೊಡಿ ಬಾಳಲೆಯಲ್ಲಿ ಶ್ರೀ ಗಣಪತಿಗೆ ಹಣ್ಣು, ತೆಂಗಿನಕಾಯಿ, ಎಲೆ ಅಡಿಕೆ, ಹಣ ಇವುಗಳನ್ನಿಟ್ಟು, ಇನ್ನೊಂದು ತುದಿ ಬಾಳಲೆಯಲ್ಲಿ ಸಿಹಿಯಾದ ಹಿಟ್ಟು [ಉಂಡೆಕ್ಕಿ, ಕಜ್ಜಾಯ] ಹೂವು ಇಟ್ಟು ಹಣ್ಣುಕಾಯಿ ಒಡೆದು

ಪೂಜೆಮಾಡಿ ಗಂಧ ದೂಪಗಳಿಂದ ಎತ್ತುಗಳನ್ನು ಪೂಜಿಸಿ ತಾವು ಗಂಧಾಕ್ಷತೆಗಳನ್ನಿಟ್ಟುಕೊಂಡು ಎತ್ತುಗಳಿಗೂ ಹಚ್ಚುವರು. ದೇವರನ್ನು ಪ್ರಾರ್ಥಿಸಿ ಎತ್ತುಗಳ ತಲೆಗೆ ಅಕ್ಕಿ ಹಾಕಿ ನೊಗ ಇಟ್ಟು ನೇಗಿಲು ಕಟ್ಟಿ ಹೂಡುತ್ತಾರೆ.

ನಂತರ ಒಂದು 'ಹೋಳಿ' ಎಂದರೆ ಎರಡು ಅಂಕವಾಗಿ ನಾಲ್ಕೈದು ಸುತ್ತು ಕಿರಿದಾಗಿ ಉಳುವರು. ಆ ಉತ್ತ ಜಾಗಕ್ಕೆ ಗೊಬ್ಬರ, ಹಸಿರು ಸೊಪ್ಪು [ನೇರಳೆ, ಹೊಲುವೆ] ತಂದು ಹಾಕುತ್ತಾರೆ ಉಳುವವರು ನೆಕ್ಕಿ ಗಿಡದ ಕೋಲನ್ನು ಹಿಡಿದೇ ಉಳುವರು. ಅಂದಿನಿಂದ ಎಲ್ಲರೂ ಪ್ರತಿದಿನ ಉಳಲು ಪ್ರಾರಂಭಿಸುವರು. ಆ ದಿನ ದೇವಸ್ಥಾನಗಳಲ್ಲಿ ಪೂಜೆ ಪುರಸ್ಕಾರ ಇತ್ಯಾದಿ ಪುಣ್ಯ ಕಾರ್ಯಗಳನ್ನು ಮಾಡುವರು.

**ಕೈಲ್ ಮುಹೂರ್ತ :**

ಕೈಲ್ ಮುಹೂರ್ತ ಹಬ್ಬವು ಕೊಡಗಿನಲ್ಲಿ ಮಾತ್ರ ಆಚರಿಸುವ ಹಬ್ಬವಾಗಿದೆ. ಕೈಲ್ ಮುಹೂರ್ತ ಹಬ್ಬವನ್ನು ಸಾಮಾನ್ಯವಾಗಿ ಸೆಪ್ಟಂಬರ್ 3 ರಂದು ಪ್ರತಿ ವರ್ಷವೂ ಆಚರಿಸುವರು.

ಆ ದಿನ ಕೊಡಗಿನಾದ್ಯಂತ ಭೂ ವ್ಯವಸಾಯ ಮಾಡುವವರೆಲ್ಲರೂ ತಮ್ಮ ಭತ್ತದ ವ್ಯವಸಾಯ [ಅಗೆ, ನಾಟಿ] ಮುಗಿಸಿ ತಮ್ಮ ಆಯುಧ [ನೇಗಿಲು ನೊಗ]ಗಳನ್ನು ಶುಚಿಗೊಳಿಸಿ ಅವುಗಳನ್ನು ಪೂಜಿಸುತ್ತಾರೆ. ಕೈಲ್ ಮುಹೂರ್ತ ಎಂದರೆ ವ್ಯವಸಾಯ ಉಪಕರಣಗಳ ಆಯುಧಪೂಜೆ ಮತ್ತು ವಿಶ್ರಾಂತಿ ದಿನವೆಂದು ಸಾಧಾರಣ ತಿಳುವಳಿಕೆಯಾಗಿದೆ. ಅಂದು ಪ್ರತಿ ಮನೆಯಲ್ಲೂ ವಿಶೇಷ ರೀತಿಯ ಭೋಜನ ಏರ್ಪಡಿಸುವರು.

ಆ ಊರಿನವರೆಲ್ಲರೂ ಸೇರಿ, ಸಾರ್ವಜನಿಕ ಸ್ಥಳಗಳಲ್ಲಿ ಆಟೋಟಗಳ ಸ್ಪರ್ಧೆ, ತೆಂಗಿನಕಾಯಿಗೆ ಗುರಿ ಇಟ್ಟು ಗುಂಡು ಹೊಡೆಯುವುದು ಇತ್ಯಾದಿ ಸ್ಪರ್ಧೆಗಳನ್ನು ಏರ್ಪಡಿಸಿ ಸಭೆ ಸೇರಿ ಬಹುಮಾನಗಳನ್ನು ವಿತರಿಸುವರು.

**ಕಾವೇರಿ ಸಂಕ್ರಮಣ :**

ಶ್ರೀ ಮೂಲ ಕಾವೇರಮ್ಮನ ಪವಿತ್ರ ತೀರ್ಥೋದ್ಭವವು ತುಲಾ ಸಂಕ್ರಮಣದಂದು ಅಕ್ಟೋಬರ್ ತಿಂಗಳ 16, 17 ರಂದು ಬರುವುದು. ಅದನ್ನು ಕೊಡಗಿನಾದ್ಯಂತ ಹಬ್ಬವೆಂದು ಆಚರಿಸುವರು. ಒಂದು ಕುಟುಂಬದಲ್ಲಿ ಒಬ್ಬನಾದರೂ ಶ್ರೀ ಕಾವೇರಿ ಉದ್ಭವ ಸ್ಥಾನ ಭಾಗಮಂಡಲ, ತಲಕಾವೇರಿಗೆ ಹೋಗಿ ಮಿಂದು ಪುಣ್ಯ ತೀರ್ಥವನ್ನು ತರುತ್ತಾರೆ.

ಮನೆಯಲ್ಲಿ ಹಿರಿಯರು ಸತ್ತರೆ ದೀಕ್ಷೆ ನಿಂತವರು, ಹೆಂಡತಿ ಸತ್ತರೆ ಗಂಡನು, ತಂದೆ ಸತ್ತರೆ ಮಕ್ಕಳೂ ಭಾಗಮಂಡಲಕ್ಕೆ ಹೋಗಿ ಪುಣ್ಯ ಸ್ನಾನ ಮಾಡಿ ಸತ್ತವರಿಗೆ ಪಿಂಡ ಹಾಕಿ ತೀರ್ಥ ಪ್ರಸಾದವನ್ನು ಮನೆಗೆ ತಂದು ಮನೆಯವರಿಗೂ, ನೆರೆಯವರಿಗೂ, ಹಂಚುವುದು ವಾಡಿಕೆ.

ಮನೆಗೆ ತೀರ್ಥವನ್ನು ತರುವುದಕ್ಕೆ ಹಿಂದಿನ ದಿನ ಗದ್ದೆ ತೋಟಗಳನ್ನು ಶೃಂಗರಿಸುವುದಕ್ಕಾಗಿ ಬೆತ್ತ ಎಂಬ ಮರದ ಕೋಲನ್ನು ಎಲ್ಲಾ ಗದ್ದೆಗಳಿಗೂ ನೆಟ್ಟು ಬೆತ್ತ ಬಳ್ಳಿ [ನೋಕಟಿ] ಎಂಬ ಬಳ್ಳಿಯ ಎಲೆಯಿಂದ ಅಲಂಕರಿಸುತ್ತಾರೆ. ಕುಟುಂಬದ ಐಕಳಿನಲ್ಲಿ ಒಂದು ಬೆತ್ತದ ಕೋಲಿನ ಗುಂಪನ್ನು ನೆಟ್ಟು ಅಲ್ಲಿ ತುಂಬಾ ಬೆತ್ತದ ಎಲೆಗಳಿಂದ ಶೃಂಗರಿಸಿ ಮನೆಯಲ್ಲಿ ತೀರ್ಥೋದ್ಭವವಾಗುವ ದಿನ ತಯಾರಿಸಿದ ತಿಂಡಿ ತಿನಸುಗಳನ್ನು ಬೆತ್ತದಿಂದ ಅಲಂಕೃತವಾದ ಕೋಲುಗಳನ್ನು ನೆಟ್ಟದರ ಮೇಲೆ ಬಾಳೆಲೆ ಹಾಸಿ, ದೀಪ ಹಚ್ಚಿಸಿ, ಗಂಧದ ಕಡ್ಡಿ ಹಚ್ಚಿಸಿ ನೈವೇದ್ಯವನ್ನಿಟ್ಟು ಶ್ರೀ ಕಾವೇರಮ್ಮನನ್ನು ನೆನೆದು ಜೋರಾಗಿ 'ಪಾಂಡವರು ಕೌರವರು ಕೂ' ಎಂದು ಮೂರು ಬಾರಿ ಕೂಗಿ ಹೇಳುತ್ತಾರೆ. ಶ್ರೀ ಕಾವೇರಿ ತೀರ್ಥವನ್ನು ಮನೆಗೆ ತರುವಾಗ ಎಲ್ಲರೂ ಸ್ನಾನಮಾಡಿ ಶುಭ್ರವಾದ ಬಟ್ಟೆಗಳನ್ನು ಧರಿಸಿ ತೀರ್ಥ ಸ್ವೀಕರಿಸುವರು. ಆ ದಿನ ತಾವು ತಯಾರಿಸಿದ ಭಕ್ಷ್ಯಗಳನ್ನು ಬಂದವರಿಗೆಲ್ಲರಿಗೂ ಕೊಡುವುದು ರೂಢಿಯಲ್ಲಿದೆ. ●

ಕೃಪೆ : ಗೌಡ ಸಂಸ್ಕೃತಿ, ಮಡಿಕೇರಿ.

---

## ಒಮ್ಮೆ ನಕ್ಕುಬಿಡಿ

ಗಿರಾಕಿ : 'ಯಾವ ತರಕಾರಿಯಿಂದ ಈ ಸಾಂಬರ್ ಮತ್ತು ಪಲ್ಯ ಮಾಡಿದ್ದೀರಿ ರುಚೀನೆ ಗೊತ್ತಾಗ್ತಾ ಇಲ್ಲ'

ಮಾಣಿ : 'ರುಚಿನೇ ಗೊತ್ತಾಗದೆ ಇರೋ ನಿಮ್ ನಾಲ್ಗೆಗೆ ಯಾವ ಊಟವಾದರೇನು, ಸುಮ್ಮನೆ ತಿನ್ನಿ ಸ್ವಾಮಿ'

* * *

ಓರ್ವ : ಜನ ಹುಷಾರಾಗಿದ್ದರೆ ಎಷ್ಟೋ ಡೈವೋರ್ಸ್‌ಗಳು ತಪ್ಪುತ್ತವೆ.

ಮತ್ತೋರ್ವ : ಹೌದು, ನಾನು ಒಪ್ತೀನಿ, ಮೊದಲಿನಿಂದಲೂ ಹುಷಾರಾಗಿದ್ರೆ ಅನೇಕ ಮದುವೆಗಳನ್ನೂ ತಪ್ಪಿಸಬಹುದು

* * *

ಸಮಯದ ಬೆಲೆಯನ್ನು ಅರಿತವರೇ ಬಾಳಿನ ಬೆಲೆಯನ್ನೂ ಅರಿತಿರುತ್ತಾರೆ. — ಡಾಕ್ಸ್

# ನಿಮ್ಮ ಪತ್ರಗಳು

## ಲೇಖನ ತೃಪ್ತಿಕರವಾಗಿದೆ

ಮಾನ್ಯರೆ,

ಕೊಡಗು ಸಂಗಾತಿ ಫೆಬ್ರವರಿ 15-28ರ ತನಕ ಇದರಲ್ಲಿ ಪುಟ 15,ರ ಲೇಖನ ನನಗೆ ಹಿಡಿಸಿತು. ಏಕೆಂದರೆಜನಾಂಗ ತನ್ನ ಸಂಸ್ಕೃತಿ ಸಂಪ್ರದಾಯಗಳಿಗೆ ಹೆಚ್ಚು ಒತ್ತು ಕೊಟ್ಟಿದ್ದು. ನಮ್ಮ ಸಂಸ್ಕೃತಿ ಸಂಪ್ರದಾಯವನ್ನು ನಾವು ಪಾಲಿಸಿದರೆ ನಮ್ಮನ್ನು ಪ್ರಶ್ನಿಸುವವರು ಇರುವುದಿಲ್ಲ. ಲೇಖನ ಫಲಭರಿತವಾಗಿದೆ. ಜನಾಂಗ ಒಂದಾಗಬೇಕು. ಕೊಡಗು ಬಾಳಬೇಕು.

ಪುಟ 19 ಕಾಮಾಣಿ ಗೂಡೆದ್ ಕಂಬಳಿ ಹರ್‍ದೋಕ್‌ಗಡ. ಈಗಿನ ಯುವತಿಯರು ಕರ್ತವ್ಯವನ್ನು ವಂಚಿಸಿ, ತಮ್ಮ ಆರೋಗ್ಯವನ್ನು ವಂಚಿಸುತ್ತಾರೆ. ಇಂತಹವರಿಗೊಂದು ಪಾಠ.

ಒಟ್ಟಿನಲ್ಲಿ ಕೊಡಗು ಸಂಗಾತಿ ದಿಟ್ಟ ಹೆಜ್ಜೆ ಇಟ್ಟಿದೆ. ನಿಮಗೆ ಶುಭಾಶಯಗಳು. ನನಗೆ ಈಗ ಕೆಲವು ಲೇಖನಗಳಿಗೆ ಬೇಡಿಕೆ ಬಂದಿದೆ. ಯಾವುದಕ್ಕೂ ನಾನು ಸಂಭಾವನೆ ತೆಗೆದು ಕೊಳ್ಳುವುದಿಲ್ಲ. ಜನಸೇವೆ ಮುಖ್ಯ. ಹಣ ತೆಗೆದುಕೊಂಡು ಬರೆದರೆ ಹಣ ಬರಬಹುದು. ಆದರೆ ಬರಹ ಹೆಣವಾಗಬಹುದು. ನಿಮ್ಮ ಪತ್ರಿಕೆಗಾಗಿ ಬರಹ ಬರೆಯುತ್ತಿರುವೆನು. ಉಜ್ವಲ ಬೆಳೆಯಲಿ, ಸಂಗಾತಿ ಧ್ಯೇಯವಾಗಲಿ.

—ಚೇಂದ್ರಿಮಾಡ ಗ. ಮುತ್ತಪ್ಪ,
ಕುಶಾಲನಗರ.

## ಕಳಕಳಿಯ ಮನವಿ

ಮಾನ್ಯರೆ,

ಗೌಡ ಸಮಾಜದ ಕಾರ್ಯಕ್ರಮಗಳು ಆಗಾಗ್ಗೆ ಮಡಿಕೇರಿ ಆಕಾಶವಾಣಿಯಲ್ಲಿ ಪ್ರಸಾರ ಮಾಡಿ, ನಮ್ಮ ಜನಾಂಗದ ಸಂಸ್ಕೃತಿ ಮತ್ತು ಸಂಪ್ರದಾಯವನ್ನು ಕರ್ನಾಟಕದ ಜನತೆಗೆ ಪರಿಚಯಿಸುವ ಕಾರ್ಯವನ್ನು ಗೌಡ ಅಕಾಡೆಮಿ ಮತ್ತು ಮಹಿಳಾ ಒಕ್ಕೂಟದವರು ಹಾಗೂ ಬೆಂಗಳೂರಿನ ಕಾವೇರಿ ನಾಡು ಸಂಸ್ಥೆಯವರು ಮಾಡಬೇಕೆಂದು ನನ್ನ ಕಳಕಳಿಯ ವಿನಂತಿ. ಕೊಡಗು ಸಂಗಾತಿ ಪತ್ರಿಕೆಕ್ಕಿಂತ ಶೀಘ್ರವಾಗಿ ಜನರ ಮನ ಮುಟ್ಟುವಂತಾ ಕೆಲ್ಸನ ತಾವುಗಳು ಮಾಡುವಿರೆಂದು ನನ್ನ ಅಭಿಪ್ರಾಯ.

—ಕೊಪ್ಪಡ ಬಾಲಕೃಷ್ಣ
ಬಾಲಂಬಿ.

## ಮಡಿಕೇರಿಯ ಕೈಲ್‌ಪೊಳ್ದ್

ದಿನಾಂಕ 21-10-98ರಂದು ಮಡಿಕೇರಿ ಗೌಡ ಸಮಾಜ ದಲ್ಲಿ ಕೈಲ್‌ಪೊಳ್ದ್ ಹಬ್ಬವನ್ನು ಆಚರಿಸಿದ್ದು ನಿಜವಾಗಿಯೂ ಸಂತೋಷದ ವಿಷಯ. ಬೆಂಗಳೂರಿನ ಕಾವೇರಿ ನಾಡು ಸಂಸ್ಥೆಯ ಸ್ಥಾಪಕರಾದ ಅಮ್ಮಾಜೀರ ಪೊನ್ನಪ್ಪನವರ ತಂಡಗಳೇ ಪದ್ಧತಿ ಯಂತೆ ಕುಪ್ಪಸದಟ್ಟಿ, ರುಮಾಲು ಮತ್ತು ಗೆಂಟೆಕಟ್ಟಿ ಸೀರೆ ಯುಟ್ಟು ತಲೆಗೆ ಕೋರ್ ಚೌಕ ಕಟ್ಟಿ ಅರೆಭಾಷೆಯಲ್ಲಿ ನರ್ತನ ಮಾಡಿ ಎಲ್ಲರ ಮನವನ್ನು ಆಕರ್ಷಿಸಿದರು.

ಆದರೆ ವರ್ಷಕ್ಕೊಂದು ಬಾರಿ ನಮ್ಮ ಅರೆಭಾಷೆಯಲ್ಲಿ ನಮ್ಮ ಸಂಸ್ಕೃತಿಯಲ್ಲಿ ಕೈಲ್‌ಪೊಳ್ದ್ ಆಚರಿಸಿದ ಮಾತ್ರಕ್ಕೆ ನಮ್ಮ ಸಂಸ್ಕೃತಿ ಬೆಳೆಯಲು ಸಾಧ್ಯವಿದೆಯೇ? ಪಟ್ಟಣದಲ್ಲಿ ವಾಸಿಸುವ ಅಥವಾ ನೌಕರಿಯಲ್ಲಿರುವ ಹೆಚ್ಚಿನ ತಂದೆ ತಾಯಂದಿರು ತಮ್ಮ ಮಕ್ಕಳಿಗೆ ಕಲಿಸುವುದೇ ಕನ್ನಡ ಭಾಷೆ ಯಾಗಿದೆ.

ಕನ್ನಡ ಮಾತನಾಡಿದರೆ ಅವರ ಘನತೆ, ಗೌರವ ಹೆಚ್ಚಾಗು ವುದೋ, ಅರೆಭಾಷೆ ಮಾತನಾಡಿದರೆ ಅವರ ಘನತೆಗೆ ಕುಂದು ಉಂಟಾಗುತ್ತದೋ ಎಂಬ ಭಯ ಬಹುಶಃ ಅವರನ್ನು ಕಾಡು ತ್ತಿರಬಹುದು. ಇದರಿಂದಾಗಿ ತಮ್ಮ ಮಕ್ಕಳಲ್ಲಿ ತಾತ್ಸಾರ ಮನೋಭಾವನೆ ಬೆಳೆಯಲು ಪೋಷಕರೇ ಕಾರಣಕರ್ತರು. ಇಂದಿನ ಮಕ್ಕಳೇ ಮುಂದಿನ ಪ್ರಜೆಗಳು ಎನ್ನುವ ಹಾಗೆ ಮಕ್ಕ ಳಲ್ಲಿ ನಮ್ಮ ಸಂಸ್ಕೃತಿಯ ಹಾಗೂ ಭಾಷೆಯ ಬಗ್ಗೆ ಹೆಚ್ಚಿನ ಮಮತೆಯನ್ನು ಮೂಡಿಸಿದ್ದೆ ಆದಲ್ಲಿ ಖಂಡಿತವಾಗಿಯೂ ಮುಂದುವರಿಯಲು ಸಾಧ್ಯವಿದೆ.

ಆದ್ದರಿಂದ ಎಲ್ಲಾ ಗೌಡ ಜನಾಂಗದವರು ಹೆಚ್ಚಿನ ಆಸಕ್ತಿ ವಹಿಸಿದ್ದೇ ಆದಲ್ಲಿ ನಮ್ಮ ಸಂಸ್ಕೃತಿ ಪ್ರಗತಿಯತ್ತ ಸಾಗುವುದರಲ್ಲಿ ಸಂಶಯವೇ ಇಲ್ಲ

ಇದೇ ರೀತಿ ಪ್ರತಿವರ್ಷ ಮಡಿಕೇರಿಯಲ್ಲಿ ಕೈಲ್‌ಪೊಳ್ದ್ ನಡೆಯಲಿ. ಎಲೆಮರೆಯ ಕಾಯಿಯಂತಿದ್ದ ನಮ್ಮ ಜನಾಂಗ ಮುಂದೆ ಬರಲಿ. ನಮ್ಮ ಉಡುಗೆ ತೊಡುಗೆ,, ಭಾಷೆ ಸಂಸ್ಕೃತಿಯ ರಕ್ಷಣೆ ಹಾಗೂ ಏಳಿಗೆ ಪ್ರತಿಯೊಬ್ಬ ಗೌಡ ಜನಾಂಗದವರ ಕರ್ತವ್ಯವಾಗಿರಲಿ.

—ಕಡ್ಲೇರ ಸುಮ ಮಂದಪ್ಪ,
ಕುಯ್ಯಂಗೇರಿ.

**ಕೊಡಗು ಸಂಗಾತಿ ಪತ್ರಿಕೆಗೆ**
**ಇಂದೇ ಚಂದದಾರರಾಗಿ**

## ಅರೆ ಭಾಷಿಕಾ ವಿಭಾಗ

### ಧಾರಾವಾಹಿ–23

ಮೂಲಕಥೆ : ಅಶ್ವಥಿ ಅರವಿಂದ್

ಅರೆಭಾಷೆಗೆ : ಎಂ.ಇ. ಮಹಮ್ಮದ್

# ಕರಿ ಚಿನ್ನ

'ಈ ಸರ್ತಿ ಡ್ಯಾಡಿ ಅಲ್ಲಲಾ ಕರೀತಾ ಇರ್ದು ನಾನ್ ತಾನೆ ಬಾ ವೀರ ಹತ್ತ್ ಕಾರಿಗೆ'

ಜೀವನ್ ಹೇಳ್ತ್.

'ಡ್ಯಾಡಿ ಅಲ್ದೇ ಇದ್ರೂ ಅದೇ ಡ್ಯಾಡಿದ್ ಮಜ ತಾನೆ ನೀನ್...'

ವೀರ ಹೇಳ್ತ್.

'ನೋಡ್ ವೀರಾ, ನನ್ನ ಡ್ಯಾಡಿದ್ ಕ್ಯಾರಾಫ್‌ಲಿ ನೀನ್ ಸಂಶಯಂದ ನೋಡ್ದು ಸರಿಯಲ್ಲ. ನನ್ನ ತಪ್ಪಿತಸ್ಥನಂಗೆ ಮಾಡ್ದು ಸರಿಯಲ್ಲ. ಮಾತ್‌ಮಾತಿಗೂ ನೀನ್ ನನ್ನ ಚುಚ್ಚ್ತಿತಾ ಒಳಲ್ಲ. ಇದರ್ನ ಹೇಳಿಯಲ್ಲ ಮಾಡಿಯೇ ತೋರ್ಸಿ ಕೊಟ್ನೆ. ನನ್ನ ನೀನ್ ಸರಿಯಾಗಿ ತಿಳ್‌ಕಂಡತ್ಲೆ. ಬಾ ಹತ್ತ್ ಜೀವನ್ ಡ್ರೈವಿಂಗ್ ಸೀಟ್‌ಲಿ ಕುದ್ದತ್.

'ಬ್ಯಾಡ ನಾನ್ ನಡ್‌ಕಂಡೇ ಬನ್ನೆ'

ವೀರ ಹೇಳ್ತ್.

'ಮೊದ್ಲ್ ನಾವು ನೆರೆಮನೆಯವು, ಈಗ ನೆಂಟರಾಗೊಳೊ. ನನ್ನ ಕಾರ್‌ಗೆ ಹತ್ತ್ತದರ್‌ಂದ ನಿನ್ನ ಮರ್ಯಾದೆಯೇನ್ ಹೋಕಿಲೆಲ್ಲಾ ಹ್ನ್ಞಾ...ಹತ್ತ್...'

ಸೊಲ್ಪ ಹೊತ್ತ್ ಗ್ಯಾನ ಮಾಡ್ದ ವೀರ ಕಾರಿಂಗೆ ಹತ್ತಿತ್.

ಜೀವನ್ ಅವಳ ಕಡೆಗೆ ನೋಡದೆ ರೋಡ್ ನೋಡಿಕಂಡೇ ಡ್ರೈವ್ ಮಾಡ್ತ್.

'ಏನ್ ಜೀವನ್ ಸಿಟ್ಟಾ?'

ವೀರ ಮಾತ್‌ಗೆ ಪೀಠಿಕೆ ಹಾಕಿತ್.

ಮೊದ್ಲ್ ಬಾರಿ ಪ್ರೀತಿಲಿ ಇದ್ದವು ಅಲ್ಲಲ್ಲಾ! ಈಗ ಸಿಟ್ಟ್ ಮಾಡಿಕೆ ಎಂತ ಇದ್ರ್ದು?

ಜೀವನ್ ರೋಡ್ ನೋಡಿಕಂಡೇ ಹೇಳ್ತ್.

ವೀರ ಏನೂ ಹೇಳ್‌ತ್ಲೆ.

ಬೋರ್‌ಗುಡ್ಡೆ ಜಂಕ್ಷನ್‌ಲಿ ಅವಳ್ನ ಇಳ್ಸಿಬುಟ್ಟ್ ಜೀವನ್ ಹೋತ್.

ಮಜ ಬಂದವ್ ಅಪ್ಪಂಗೆ ಗೊತ್ತಾಗ್ಲೆತ್ಲೆ.

ಜೀವನ್ ಮೆಲ್ಲೆ ವಾಪಸ್ ಬಂದ್ ತನ್ನ ಕ್ಯಾಂಬರೆ ಬಾಗ್ಲ್ ತೆಗ್ದ್ ಹಾಸಿಗೆ ಮ್ಯಾಲೆ ಹೊಣಕಿತ್. ಸತ್ತ ಅಣ್ಣನ ಗ್ಯಾನ ಮಾಡ್ ಕಾಕನ ಅವನ ಕಣ್ಣ್‌ಲಿ ನೀರ್ ಬಾತ್.

* * *

ದೇವಯ್ಯ ತಾನ್ ಮುಂದೆ ಎಂತ ಮಾಡೊಕೂತ ಪ್ಲಾನ್ ಹಾಕಿಕೆ ತನ್ನ ಗೂಂಡಗಳ್ನ ಕರ್ಸಿತ್.

ರಂಜನ್‌ದ್ ರಕ್ತಕ್ಕೆ ಸರಿಯಾದ ರಕ್ತ

ಇಲ್ಲಿವರೆಗೆ...............

ಬೋರುಗುಡ್ಡೆ ದೇವಯ್ಯ ನಾಡ್‌ಕೊಲ್ಲಿ ಮಾದಪ್ಪಂಗೆ ಬೈದರೂ ಸನ ಅವು ಮಾನುೂಲಿನಂಗೆ ಹೆಣ ನೋಡಿ ಬಂದೊ. ವೀರಾ ಮಾತ್ರ ಹೆಣನ ಸುಡ್ಕಳಿಗೆ ತಕಂಡ್ ಹೋಕನ ಒಂದು ಹೂ ಹಾರ ತಕಂಡ್ ಹೋಗಿ ರಂಜನ್‌ಗೆ ಹಾಕಿತ್. ಆಗ ಜೀವನ್ ಅವಳೊಟ್ಟಿಗೆ ನಷ್ಟ ವಿಷಯದ ಬಗ್ಗೆ ಅನುಕಂಪಲಿ ಮಾತಾಡ್ದೆ.

ಮುಂದೆ ಓದಿ.................

ಮನೆಲಿ ಯಾರ ಸದ್ದ್ ಕೂಡ ಇಲ್ಲೆ. ಮನೆಯ ಒಂದ್ ಮೂಲೆಲಿ ಗೋಡೆಗೆ ಒರಗಿ ಕಾಲ್ ನೀಂಡಿ ಕುದ್ದಿತ್ತ್ ಕುಟ್ಟ. ರಂಜನ್ ಸತ್ತೊದರ್‌ಂದ ಕುಟ್ಟಂಗೆ ತುಂಬ ಬೇಜರ.

ಜೀವನ್ ಬೆಡ್ರೂಂಗೆ ಹೋತ್. ಸುಸ್ತಾಗಿ ಮಮ್ಮಿ ಹಾಸಿಗೆಲಿ ಮಲಿಗಿತ್ತ್. ಮಮ್ಮಿದ್ ಕಾಲ್ ಬುಡಲಿ ಕುದ್ದಿದ್ದ ಅತ್ತಿಗೆ ಗೌರನ ಕಣ್ಣ್ ಊದಿ ಕೆಂಪಾಗಿ ನೀರ್ ಹರೀತಲೇ ಇತ್ತ್.

ಜೀವನ್ ಮೆಟ್ಲ್ ಹತ್ತಿಕಂಡ್ ಮಹಡಿಗೆ ಹೋಕನ ಬೋರ್‌ಗುಡ್ಡೆ ದೇವಯ್ಯ ಟರ್ನಿಂಗ್ ಚೇರ್‌ಲಿ ಕುದ್ದ್‌ಕಂಡಿದ್ದದ್ ಕಂಡತ್. ಅವನ ಕೈಲಿ ಅರ್ಧ ಸೇದಿದ ಸಿಗರೇಟ್ ಇತ್ತ್. ಟೀಪಾಯಿ ಮೇಲೆ ಅರ್ಧ ಖಾಲಿ ಆಗಿದ್ದ ವಿಸ್ಕಿ ಬಾಟ್ಲ್ ಇತ್ತ್.

ಜೀವನ್‌ಗೆ ಬೆನ್ನ್ ಹಾಕಿ ಕುದ್ದಿದರ್‌ಂದ ತೆಗಿಯೋಕು. ಎರಡ್ ಗಂಟೆ ಆಕನ ಕರಾಟೆ ಕಾಳ, ಸೈಕಲ್ ಉಸ್ಮಾನ್, ರೌಡಿ ಬಿದ್ದು ದೇವಯ್ಯನ ಬಂಗ್ಲೆಗೆ ಬಂದೊ.

'ಆ ಚಂಗುಮಣಿನ ಇನ್ನ್ ಈ ಭೂಮಿ ಮೇಲೆ ಮೊಡ್ಡಿಕೆ ಬೊತ್ತ್. ಎಷ್ಟ್ ಕಷ್ಟ ಆದರೂ ಪರ್ವಾಗಿಲ್ಲೆ, ಅವನ ತಲೆನ ನೀವ್ ಮೂರ್‌ಜನ ಸೇರಿ ತರೊಕು.'

'ಯಾರ್ ಸಾರ್, ಗಾಳಿಮರ ಸೋಮಯ್ಯನ ಮಜ ಚಂಗುಮಣಿನ ವಿಷಯ ಹೇಳ್ತಾ ಒಳ್ರಾ?

ಕಾಳ ಕೇಳ್ತ್.

'ಹೌದ್ ಮಾರಾಯ! ಆ ನಾಯಿ ಸೂಳೆ ಮಜನ ವಿಚಾರ ಅಲ್ದೆ ಇನ್ಯಾರ್ದ್?'

'ನೀವೇ ಅಲಾ ಸಾರ್ ಅವನ ಜಾಮೀನ್‌ಲಿ ಬುಡ್ಸಿದ್? ಅವನ ತಂಗೆ ಮತ್ತೆ ಆ ಫ್ಯಾಕ್ಟ್ ಮಾದಯ್ಯ ಸೇರಿ ರಂಜನ್ ಸಾರ್‌ನ ಕೊಂದದಕ್ಕೆ ಚಂಗುಮಣಿನ ನಾವು ಕೊಲೆ ಮಾಡ್ರೆ ಅದ್ ಸರಿ

ಯಾದೆನಾ ಸಾರ್ ?'

ಸೈಕಲ್ ಉಸ್ಮಾನ್ ಕೇಳ್ತ್.

ನಾನ್ ಹೇಳ್‌ದಷ್ಟ್ ನೀವು ಮಾಡ್ರೆ ಸಾಕ್ ಅಧಿಕ ಪ್ರಸಂಗ ಬ್ಯಾಡ. ಆ ಬೊಡ್ಡಿ ಮಜನೇ ನಮ್ಮ ರಂಜನ್‌ನ ಕೊಂದದ್. ನೀವು ಒಮ್ಮೆ ಅವನ ನನ್ನ ಹತ್ರ ಕರ್ಕಂಡ್ ಬನ್ನಿ ನಾನೇ ಹಲಸಿನಕಾಯಿ ಕೊಚ್ಚಿದಂಗೆ ಅವನ ತಲೆನ ಕೊಚ್ಚಿಹಾಕನೆ. ಮತ್ತೆ ತುಂಡ್ ಮಾಡಿ ಸುಟ್ರೆ ಆತ್.

ಜೋರ್‌ಗುಡ್ಡೆ ದೇವಯ್ಯ ತನ್ನ ಕೈನ ಹಿಂದಕ್ಕೆ ಕಟ್ಟಿಕಂಡ್ ಹಾಲ್‌ಲಿ ಅತ್ತ ಇತ್ತ ನಡ್ದಾಡ್ತ್.

ಮತ್ತೆ ಒಂದು ನೋಟ್‌ನ ಕಂತೆ ತೆಗ್ದ್ ಗೂಂಡಗಳ ಕೈಗೆ ಕೊಟ್ಟತ್.

'ಇದರ್ನ ಮೂರ್ ಜನ ಸರಿಯಾಗಿ ಪಾಲ್ ಮಾಡ್‌ಕಣಿ.'

ಗೂಂಡಗಳ್ನ ಕಳ್ಸಿಬುಟ್ಟ್ ದೇವಯ್ಯ ಸರ್ಕಲ್ ಇನ್‌ಸ್ಪೆಕ್ಟರ್ ಪ್ರಭುದಾಸ್‌ಗೆ ಫೋನ್ ಮಾಡ್ತ್.

'ಹಲೋ ಮಿಸ್ಟರ್ ಪ್ರಭುದಾಸ್, ನಾನ್ ದೇವಯ್ಯ ಮಾತಾಡ್ತ ಒಳೆ. ಆರೋಪಿ ಯಾರ್‌ಂತ ಗೊತ್ತಾತಾ ? ಸೋಮಯ್ಯ ಮತ್ತೆ ಅವನ ಮಗ್ಳು ನೀಲು ಈಗಳೂ ಆಸ್ಪತ್ರೆಲಿ ಬೆಡ್ ಹಾಲ್ ಕುಡ್ ಕಂಡೇ ಒಳೋನಾ ?'

'ಆ ಇಬ್ಬರ್‌ನ ಸಾ ನಾನ್ ಕಸ್ಟಡಿಗೆ ತಕಂಡೊಳೆ, ಅವ್ರಿಗೆ ಸೊಯಿ ಇತ್ತ್‌ಲೆಗಡ, ಆದರ್‌ಂದ ಕೊಲೆ ಮಾಡ್ದವು ಯಾರ್‌ಂತ ಗೊತ್ತಾತ್‌ಲೆಗಡ. ಅವುಳು ನನ್ನ ಕೈಗೆ ಒಂದ್ ಸಲ ಸಿಕ್ಕಲಿ, ಒಂದ್ ಸೆಕೆಂಡ್‌ಲಿ ಸತ್ಯ ಹೇಳ್ಸಿಕೆ ನಂಗೆ ಗೊತ್ತುಟ್ಟು.

ಹಲೋ...ಹಲೋ

ಅಷ್ಟರ್‌ಲಿ ಫೋನ್ ಕಟ್ಟಾತ್.

'ಹಲೋ...ದೇವಯ್ಯ ಹಿಯರ್, ಹೌದ್ ಕಟ್ಟಾಗೋತ್. ಈ ಹಾಳಾದ ಫೋನೂ...ಹೇಳ್ತ್ ಪ್ರಭುದಾಸ್.'

ನಾನ್ ಪೋಸ್ಟ್ ಮಾರ್ಟಂ ರಿಪೋರ್ಟ್ ನೋಡ್‌ದೆ. ಅಷ್ಟೊಂದ್ ಆಳದ ಗಾಯ ಮಾಡೋ ತಾಕತ್ತ್ ಅವ್ರಿಗೆ ಇಲ್ಲೆ ಇನ್ನ್ ಆ ಸೋಮಯ್ಯ ಕೊಲೆ ನಡ್ದ ಸಮಯಲಿ ಮನೆಲಿ ಇತ್ತ್‌ಲೆಂತ ಹೇಳ್ದ್. ಅಂವ ಯಾವುದೋ ಮೊದ್ವೆಗೆ ಹೋಗಿತ್ತ್ ಗಡ. ಇನ್ನ್ ಇದರ್ಗ ಚಂಗುಮಣಿ. ಅಲ್ಲಾಂದ್ರೆ ಫ್ಯಾಕ್ಟ್ ಮಾದಯ್ಯ. ಚಂಗುಮಣಿ ಜಾಮೀನ್‌ಲಿ ಬುಡುಗಡೆ ಆದಂದೇ ಈ ಕೊಲೆ ನಡ್‌ದಿದ್ರೂ ಅವನೇ ಮಾಡಿದರ್‌ಂತ ಹೇಳಿಕೆ ಆಲೆ ನಂಗೆ. ಆ ಫ್ಯಾಕ್ಟ್ ಮಾದಯ್ಯನ ಮೇಲೆ ಬಲವಾದ ಸಂಶಯ ಉಟ್ಟು. ಅಂವ ಊರ್‌ಲಿ ಇಲ್ಲೆ. ನಾನ್ ಅವನ ಹುಡ್ಕಿಕೆ ಪೊಲೀಸ್‌ನ ಬುಟ್ಟೊಳೆ.

'ನನ್ನ ಮಜನ ಕೊಂದಂವ ಚಂಗುಮಣಿ ಆಗಿದ್ದರೆ ?'

ದೇವಯ್ಯ ಕೇಳ್ತ್.

ಚಂಗುಮಣಿ ಆಗಿದ್ದರೆ ನೀವ್‌ಗೆ ಸೊಲ್ಪ ಕಷ್ಟ ಉಟ್ಟು ದೇವಯ್ಯಣ್ಣ. ಅವಂಗೆ ಜಾಮೀನ್ ಕೊಟ್ಟ್ ಬುಡ್ಸಿದ್ ನೀವ್ ತಾನೆ ?

ಜೈಲ್ ಅಡ್‌ವೈಸರಿ ಬೋರ್ಡ್ ಮತ್ತೆ ಸರ್ಕಾರಕೆ ರೆಕ್‌ಮಂಡ್ ಮಾಡ್ಸಿಬುಟ್ಟ್ ಏಳ್ ದಿನದ 'ಎಮರ್ಜೆನ್ಸಿ ಬೇಯಿಲ್'ಲಿ ಚಂಗುಮಣಿನ ಬುಡ್ಸಿದ ಎಲ್ಲಾ ಜವಾಬ್ದಾರಿ ನಿಮ್ಮ ತಲೆ ಮೇಲೆ ಬಿದ್ದದೆ. ನಾನ್ ಸೆಂಟ್ರಲ್ ಜೈಲ್ ಆಫೀಸರ್ ನಕ್ಕಲೆ ಕೂಡ ಮಾತಾಡಿಯೊಳೆ. ಚಂಗುಮಣಿದ್ ಕಾನ್ಫಿಡೆನ್ಸಿಯಲ್ ರಿಪೋರ್ಟ್ ತೃಪ್ತಿಕರ ವಾಗಿತ್ತ್‌ಂತ ಆ ಆಫೀಸರ್ ಹೇಳ್ತ್. 'ಕಾಮ್ ಅಂಡ್ ಕ್ವಯಟ್ ಕನ್‌ವಿಕ್ಟ್' ಅಂವ ಇನ್ನೊಂದ್ ಕೊಲೆ ಮಾಡಿಕೆ ಆ ಸಂದರ್ಭ ಹಂಗೆ ಇರೊಕು ಅಷ್ಟೆ. ತನ್ನ ತಂಗೆದ್ ಮಾನ ಹಾನಿ ಮಾಡ್‌ದರ್ನ ಚಂಗುಮಣಿ ಒಂದು ವೇಳೆ ಕಂಡಿರ್ದ್. ಹಂಗೆ ಆಗಿದ್ದರೆ ಕಾನೂನು ಅವಂಗೆ ಸಹಾಯ ಮಾಡ್ದ್ ಆದರೆ ಇದಿಕ್ಕೆ ಮುಂದೆ ಚಂಗುಮಣಿ ಒಂದ್ ಕೊಲೆ ಕೇಸ್‌ಲಿ ಜೀವಾವಧಿ ಶಿಕ್ಷೆಗೆ ಗುರಿ ಆದಂವ. ಜಾಮೀನ್‌ಲಿ ಬುಡ್‌ಗಡೆ ಆದ ದಿನನೇ ಅಂವ ಲೋಕಲ್ ಪೊಲೀಸ್‌ಗೆ ರಿಪೋರ್ಟ್ ಕೂಡ ಮಾಡದೇ ಇಂತ ಒಂದ್ ಕೊಲೆ ಮಾಡ್‌ತ್‌ಂತ ಹೇಳ್ರೆ...ಯಾವುದಕ್ಕೂ ಆ ನೀಲು ಗೂಡೆನ ಒಮ್ಮೆ ನಾವು ಎನ್‌ಕ್ವಯರಿ ಮಾಡಿ ನೋಡೊಕು. ಮತ್ತೆ ಮಾತಾಡ್ನೆ, ಮಡ್‌ಗ್ಲಾ...? ಪ್ರಭುದಾಸ್ ರಿಸೀವರ್ ಮಡ್‌ಗಿತ್.

ಅಷ್ಟರ್ಲಿ ಗಾಳಿಮರ ಸೋಮಯ್ಯನ ಮತ್ತೆ ಅವನ ಮಗಳ್ನ ಕೊತ್ತ್‌ಕಂಡ್ ಬಂದ ಜೀಪ್ ಪೊಲೀಸ್ ಸ್ಟೇಷನ್ ಮುಂದೆ ನಿತ್ತತ್.

'ಇಳ್ಗ್! ಇಳ್‌ದ್ ಬಾ ಮಾರಾಯ ನಿನ್ನವ್ವ...'

ಒಬ್ಬ ಪೊಲೀಸ್ ಪೇದೆ ಸೋಮಯ್ಯನ ಶರ್ಟ್ ಹಿಡ್‌ದ್ ಜೀಪ್‌ಂದ ಎಳ್‌ದ್ ಇಳಿಸ್ತ್.

ಜೀವಮಾನಲೇ ಪೊಲೀಸ್ ಸ್ಟೇಷನ್‌ಗೆ ಮೊದಲ್ ಹೋಗ್ತಾ ಇರುದಾರ್‌ಂದ ಸೋಮಯ್ಯಂಗೆ ಬಾಳ ಹೆದ್ರಿಕೆ ಆತ್.

ಪೊಲೀಸ್ ಎಳೆಯ್‌ಕಾಕನ ಅವನ ಕುತ್ತಿಗೆ ಉಳಕಿದಂಗಾಗಿ ನೋವಾತ್. ಹೆದ್ರಿ ಸೋಮಯ್ಯನ ಚಡ್ಡಿ ಕೂಡ ಒದ್ದೆ ಆತ್.

'ಮುಟ್ಟಿಕೆ ಮುಂದೆ ಉಚ್ಚೆ ಹೊಯ್ಯಂಡಿಯಾ ರ್‍ಯಾಸ್ಕಲ್, ನೀನೆಲ್ಲ ಕಪ್ಪೆ ಜಾತಿಗೆ ಹುಟ್ಟಿಬೋಕು'

ಹೆಡ್‌ಕಾನ್‌ಸ್ಟೇಬಲ್ ರಾಘವ ಜೋರ್ ಮಾಡ್ತ್.

'ಸಾರ್ ನೀವ್‌ಗೆ ಕೈಮುಗ್ದ್ ಬೇಡಿಕಂಡನೆ ನನ್ನ ಮಕ್ಕಂಗೆ ಮಾತ್ರ ಹೊಡಿ ಬಡಿ'

ನೀಲು ಪೊಲೀಸರ ಮುಂದೆ ಬೇಡಿಕಂಡ್ ಹೇಳ್ತ್.

'ನಿನ್ನ ಅಪ್ಪನ ವಿಷಯಲಿ ಬೇಕಾದ್ರೆ ನಾವು ನಿನ್ನ ಡಿಮ್ಯಾಂಡ್‌ನ ನೆರವೇರ್‌ಸುವೆ ಆದರೆ ನಿನ್ನ ವಿಷಯಲಿ ಮಾತ್ರ ರಿಯಾಯಿತಿ ಇಲ್ಲವೇ ಇಲ್ಲೆ ಹ್ಹ್ಹಂ ಇಳಿ ಕೆಳಗೆ'

ಹೆಡ್‌ಕಾನ್‌ಸ್ಟೇಬಲ್ ನೀಲುನ ಕೈನ ಬಲವಾಗಿ ಹಿಡ್ದ್ ಎಳ್ದ್ ಜೀಪ್‌ಂದ ಇಳ್ಸಿತ್.

[ಸಶೇಷ]

# ನಾಯಿ ಪಡ್ಚ ಹಂದಿ ಪದ್ರಾಡ್....

ಇನ್ನ್ ನಂಗೆ ಬೊತ್ತ್ ಆ ಹಂದಿನ ಸಾಂಕಿಕೆ. ಓಂಬಕೆ ಪಾಕಿಕೆ ಹೋಕಾಕನ ದೊಡ್ಡ ರಕ್ಕಸನಂಗೆ ಆಡ್ದ್ಟೆ. ಬಾಣಲಿ ಕಟ್ಟಿಕೆತೇಳಿ ಹಗ್ಗ ಬಿಚ್ಚಿರೆ ನನ್ನ ಎಳ್ಕಂಡ್ ಓಡ್ದೆ. ನಿಲ್ಸಿಕೆ ನೆಂಗಾದೆನಾ. ಬುಟ್ರೆ ಸೀದಾ ಹೋದು ಆ ಮಾಷ್ಟೆ ತೋಟಕೆ ಅವರ ಕೈಲಿ ಹೇಳ್ಸಿಕಂಡ್ ನಂಗೆ ಸಾಕಾತ್. ಈ ಸಲಾದರ್ ಹಬ್ಬಕೆ ಅದರ ಹೊಡ್ಡ್‌ಬುಡ್ ತೇಳಿ ಅನ್ನಂದ್ ಕೈಲ್ ಪೊಳ್ದ್‌ಗೆ ಒಂದು ತಿಂಗ ಮುಂದೇನೆ ಪಿರಿಪಿರಿ ಶುರಾಗಿತ್. ನಂಗೂ ಅದ್ ಸರಿತ್ತೇಳಿ ಕಂಡತ್. ಹಂಗೆ ಹಬ್ಬಕ್ಕೆ ಯಾರಿಗೆಲ್ಲ ಮಾಂಸ ಬೇಕ್‌ತ್ತೇಳಿ ಪಟ್ಟಿ ಮಾಡಿಕಂಡ್ ಸ್ವಲ್ಪ ಸ್ವಲ್ಪ ಅಡ್ವಾನ್ಸ್ ತಗಂಡೆ. ಹಂದಿಗೆ ಗುಂಡು ಹೊಡ್ಯಕೆ ಅಪ್ಪಣ್ಣು ಬಾವಂಗೆ ಹೇಳಿದ್ದೆ. ಅಚ್‌ಕಟ್ಟ್ ಮಾಡಿಕೆ ಮಣಿಗೆ ಬರಕುತಾ

ರಾಜ ಚೆರಿಯಮನೆ, ಜೋಡುಪಾಲ,

ಕೇಳಿಕಂಡಿದ್ದೆ. ನಾಣು ಹಂಗಿದ್ದರೂ ಹೇಳದಿದ್ದರೂ ಬಂದದೆತ ನಂಗೆ ಲಾಯ್ಕ ಗೊತ್ತುಟು. ಒಟ್ಟಿಗೆ ನಾನ್ ಸೇರಿಕಂಡರೆ ಮತ್ತೆಸ್ಟ್ ಜನ ಬೇಕುತ ಗ್ಯಾನ ಮಾಡಿಕಂಡ್ ಕೈಲ್‌ಪೊಳ್ದ್ ಹಬ್ಬಕೆ ಒಂದು ದಿನ ಮುಂದೆ ಮಧ್ಯಾಹ್ನದ ಮೇಲೆ ಅವುಕ ಬಾಕೆ ಹೇಳ್ದೆ. ಅಪ್ಪಣ್ಣು ಬಾವ ಮಧ್ಯಾಹ್ನದ ಹನ್ನೆರ್ಡ್ ಗಂಟೆಗೆ ಬಂದ್ ನಾನ್ ಊಟ ಮಾಡ್ತಲೆ ತೇಳಿ ಸೀದಾ ಅಡಿಗೆ ಮನೆಗೆ ಹೋತ್. ಅವನ ಹಣೆಬರನೇ ಹಂಗೆ ತೇಳಿ ನಾನ್ ಸುಮ್ಮನೆ ಆಕಂಡೆ. ಒಂದೂವರೆ ಗಂಟೆಗಾಕನ ಮಣಿನು ನಾಣುನು ಬಂದೊ. ಊಟ ಮಾಡಿಯೇ ಬಂದದ್‌ತ ಹೇಳ್ದೊ. ಮಣಿ ಕೇಳ್ತ್ ಚೂರು ತೋಟ ಉಟ್ಟ್ಯಾತ. ನಾ ಇಲ್ಲೆ ತೇಳಿ ಬಿ.ಬಿ. ತೋಟ ಉಟ್ಟ್ ಸಾಕಾದು ಕಂಡದೆ ತಾ ಹೇಳ್ದೆ. ಅಪ್ಪಣ್ಣು ಬಾವ ಹೇಳ್ತ್. ಬಿ. ಬಿ. ಬ್ಯಾಡಪ್ಪ. ಕೈವಾರೆಗೆ ಹೊಡ್ದರೆ ಎರಡನೆ ನಂಬರ್ ಚಿಲ್ ಸಾಕ್. ಬೇಕಾದ್ರೆ ನಾನೇ ಹೊಡ್ದನೆ ತ ಹೇಳ್ತ್. ಅವನ ಮಾತ್ ಕೇಳ್ರೆ ಆಕಿಲೆ ಉಂಡೆ ಇದ್ದರೆ ತಂಬಾ ನಾ ತುಂಬಿಸಿನೆ ತೇಳಿ ನಾಣು ಹೇಳ್ತ್. ನಾನ್ ಐದ್ ಚಿಲ್ಲ್‌ನ ಉಂಡೆ ತಂದ್ ಕೊಟ್ಟೆ. ಮಣಿ ನಾಕನೆ ನಂಬರ್ ತೋಟೆ ಬಿಚ್ಚಿ ಉಂಡೆ ತುಂಬಿಸಿತ್. ನಾವೆಲ್ಲ ಕೋವಿ ತಗಂಡ್ ಹಂದಿನ ಹತ್ರ ಹೋದೊ. ಹೋಕಾಕನ ಅವ್ವ ಹೇಳ್ತ್ ಹಂದಿನ ಬಿಚ್ಚಿ ಬುಟ್ಟ್ ಮತ್ತೇ ಹೊಡೆನೀ, ಕಟ್ಟಿ ಹಾಕಿದಲ್ಲಿಗೆ ಹೊಡಿಬಡೀಕ. ಅಷ್ಟ್ ಹೊತ್ತಿಗೆ ನಾಣು ಹೋಗಿ ಬುಳ್ಳ್ಗಿ ತಾತ್.

ಹೊರ್ಡ್‌ಕಾಕನ ಅಪ್ಪಣ್ಣು ಬಾವ ಹೇಳ್ತ್ ಹತ್ರ ಹತ್ರ ನೂರು ಕೆ. ಜಿ. ಆದು ಕಂಡದೆತಾ. ಮಣಿ ಆಗ ಇಲ್ಲೆಪ ಆದರೆ ತೊಂಬತ್ತ್ ಕೆ.ಜಿ. ಆದಕ್ಕಿಂತ ಒಂದು ಪನಿನೂ ಮಾಸ ತೂಕ ಜಾಸ್ತಿ ಆಕಿಲೆತಾ ಹೇಳ್ತ್. ಆಗ ನಾಣು, ನೀವೆಂತಹ ತೇಳಿ ಮಾತಾಡ್ರೆ. ಹಂದಿಗೆ ವರ್ಷ ಎರಡಾವುಟು. ಮಾಸ ತೂಕ ಜಾಸ್ತಿ ಬಾದು, ನೂರಿಪ್ಪತ್ತ್ ಕೆ.ಜಿ ಕಂಡಿತಾ ಆದು. ಬೇಕರೆ ಒಂದು ಕುಪ್ಪಿ ಗೋಂಕುಗೆ [ಗೇರ್ ಹಣ್ಣ್‌ನ ಸರಾಯಿ] ಬೆಟ್ಟ್ ಕಟ್ಟುನತೇಳ್ತ್. ಹಂಗೆ ಲಾಸ್ಟ್‌ಗೆ ನೂರಕ್ಕಿಂತ ಕಮ್ಮಿ ಆದರೇ ನಾಣು, ಅಪ್ಪಣ್ಣು ಮತ್ತೆ ಮಣಿಗೆ ಒಂದು ಕುಪ್ಪಿಕೊಡಕು, ಜಾಸ್ತಿ ಆದರೆ ಅವಿಬ್ಬರು ನಾಣುಗೆ ಒಂದು ಕುಪ್ಪಿಕೊಡಕುತಾ ತೀರ್ಮಾನ ಆತ್.

ಅವರ್ನೆಲ್ಲಾ ದೂರ ನಿಲ್ಲಿಕೆ ಹೇಳಿ ನಾನ್ ಹೋಗಿ ಹಂದಿ ಕುತ್ತಿಗೆಂದ ಹಗ್ಗ ಬಿಚ್ಚಿ ಬಂದ್ ಅಪ್ಪಣ್ಣು ಬಾವ ತುಂಬಾ ಹೊತ್ತ್ ಗುರಿ ನೋಡಿ ಕೈಪರೆಗೆ ಟ್ವೀ...ತೇಳಿ ಗುಂಡು ಹೊಡ್ದರೆ ಅದ್ ಹೊಟ್ಟೆ ಅಡಿಗಾಕ್ತಾ. ಹಂದಿ ಹಾರಿಬಿದ್ದ್ ಓಡ್ರೆ ಜೇಳಿ ಅದರ ನೆರಳ್ ಸನ ಕಂಡುಟತಾ. ನಾನ್ ಥೇ ನೀವು ಎಂತ ಮಾಡ್ದ್ ಬಾವ ತ ಕೇಳ್ದೆ. ಬಾಕಾಕನೆ ಎರಡ್ ಪ್ಯಾಕೆಟ್ ಏರಿಸಿ ಬಂದಳೊ. ಮತ್ತೆಲ್ಲಂದ ಗುಂಡು ತಿಸ್ತಾದುತ ಕೇಳ್ತ್. ನಾನ್ ಎರಡ್ ಪ್ಯಾಕೆಟ್ ಹಾಕ್‌ಕಾಕನ ನೀ ನಾಕ್ ಹಾಕಿತ್ಲೇರಾ ತ ಅಪ್ಪಣ್ಣು ಬಾವ ತಿರ್‌ಗಿ ಕೇಳ್ತ್. 'ಅವರ ಮಾತ್ ಕೇಳಿಕಂಡ್ ನಿತ್ತರೆ ಆಕಿಲೆ, ಹಂದಿ ಎಲ್ಲಿ ಹೊವ್ವು ತಾ ಹುಡ್ಕನಾ ರಾಜಣ್ಣ, ನಾಯಿನ ಬಿಚ್ಚಿಕಣಿ ಹಂಗೆ ತೋಟನು ನಾಕ್ ತಕಣಿ' ತ ಮಣಿ ಹೇಳ್ತ್. ಅವ್ವ ಹೊರಗೆ ನಿಂತ್‌ಕಂಡ್ ಪಿಳಿಪಿಳಿತಾ ಕಣ್ಣ್ ಬುಡ್‌ತ್ತಿದ್ದೋ. ಎಷ್ಟಾದರೂ ಎರಡು ವರ್ಷ ಸಾಕಿದ ಮೇಲೆ ಹಂದಿ ಧರ್ಮಕ್ಕೆ ಕಾಡ್ ಹತ್ತಿರೆ ?

ನಾವೆಲ್ಲ ಹಂದಿನ ಜಾಡ್ ನೋಡಿಕಂಡ್ ಹೊರ್ಟ್ಯೊ. ಹಂದಿ ನೋಡ್ರೆ ತುಂಡು ಕಾಡ್ ದಾಟಿ ಹೋವ್ವು. ಕಾರೆ ಮರ ತಟ್ಟಿಗೆ ಎತ್ತ್‌ಕಾಕನ ಅಪ್ಪಣ್ಣು ಬಾವ ಹೇಳ್ತ್. ರಕ್ತ ಬಿದ್ದುಟು ಹಂದಿಗೆ ಗುಂಡು ಅವ್ವತ ಕಂಡದೆತ. ನಾನ್ ನಾಯಿನ ಕರ್ಕಂಡ್ ರಕ್ತ ಬಿದ್ದಲ್ಲಿಗೆ ಹೋದೆ. ನಾಯಿ ರಕ್ತ ಮೂಸಿ ನೋಡಿ ಬೊಗಳಿಕಂಡ್ ಮುಂದೆ ಓಡ್ತ್. ನಾವೆಲ್ಲ ಅದರ ಹಿಂದೆನೇ ಓಡ್ದೊ. ಕೊಲ್ಲಿ ಕರೆಗೆ ಹೋಗಿ ನಾಯಿ ನಿತ್ತ್ ಒಮ್ಮೆ ಬೊಗ್‌ಳಿ ಎಡಕ್ಕೆ ಹಾರಿ ಕುಂಯೀ ಕುಂಯೀ ತೇಳ್ತ್. ನೋಡ್ರೆ ಹಂದಿ ಅಲ್ಲಿ ಮಲ್ಗಿಟು. ನಾಣು ಈಗ ನಾನ್ ಹೊಡ್ದನೆ ತೇಳಿ ಕೋವಿ ಹಿಡ್ಕಂಡ್ ಬಗ್ಗಿಕಂಡ್ ಮೆಲ್ಲೆ ಮೆಲ್ಲೆಂಗೆ ಹತ್ರ ಹತ್ರ ಹೋಗಿ ಢಮಾರ್ ತೇಳಿ ಬುಟ್ಟ್ಯತ್. ಆಗ ಒಂದ್ ಸಲ 'ಕುಂಯ್ಟ್' ತೇಳಿ ಶಬ್ದ ಕೇಳ್. ನಾನ್ ಗುಂಡಾದಲ್ಲಿಗೆ ಓಡ್ದೆ. ನೋಡ್ರೆ ಎಂಥಾ ? ನಾಯಿ ಪಡ್ಚ ಹಂದಿ ಪದ್ರಾಡ್...

ನಾನ್ ಮಂಡೆ ಬಿಸಿಲಿ ತಲೆ ಮೇಲೆ ಕೈ ಹೊತ್ತ್ ಕುದ್ದೆ.

ಹಂದಿ ಕಾಡ್ ಹತ್ತಿರೆ ಪಂಥದ್ ಒಂದು ಕಟ್ಟಿ ಗುಂಕ್ ಹೋದೆ ತಾ ನಂಗೆ ಬಚ್ಚಮರಾಯು ತ ಅಪ್ಪಣ್ಣು ಬಾವ ಹೇಳ್ದರ ಕೇಳಿ ಮಣಿ ಇಬ್ಬರಿಗೂ ನಾಯಿಂಗೆ ಬೈದ್ದಂಗೆ ಬೈತ್. ಆ ಕೋವಿ ಇಲ್ಲಿ ಕೊಡುತಾ ನಾಣುನ ಕೈಯಿಂದ ಕಿತ್ತ್, ನೀವು ಮನೆಗೆ ಸಾಯನಿ, ಬನ್ನಿ ರಾಜಣ್ಣ, ನಾವು ಪೋಯಿ ಇಬ್ಬರೆ ಸಾಕ್ ತೇಳಿ ನನ್ನ ಕರ್‌ಕಂಡ್ ಹೋತ್. ಅವಿಬ್ಬರು ದಯ್ಯಗಳಂಗೆ ಅಲ್ಲೆ ನಿಂತಿದ್ದೊ. ಸ್ವಲ್ಪ ದೂರ ಹೋಕಾಕನ ಒಂದು ಪಾರೆ ಕಲ್ಲ್ ಮೇಲೆ ಕುದ್ದ್ ಬೀಡಿ ಹೊತ್ತಿಸಿ ಮಣಿ ಹೇಳ್ತ್ 'ರಾಜಣ್ಣ ಹಂದಿ ಸಿಕ್ಕಿರೆ ದೇವರಕೊಲ್ಲಿ ಗುಳಿಗಂಗೆ ಒಂದು ಕೋಳಿ ಕೊಯ್ಸನೆ ತೇಳಿಕಣಿ ಗುಳಿಗನ ನಂಬಿರೆ ಕಂಡಿತ ಹಂದಿ ಸಿಕ್ಕಿದೆ. ನಾ ಅತ್ ತೇಳಿ ತಲೆ ಅಲ್ಲಾಡಿಸಿದೆ. ಎಷ್ಟಾದರು ಸಂಕಟ ಬಾಕಾಕನ ವೆಂಕಟರಮಣ ಅಲ್ಲಾ ? ಅಲ್ಲಿಂದ್ ಎದ್ದ್ ಹೋಕಾಕನ ಮತ್ತೆ ಮಣಿ ಹೇಳ್ತ್ ಸೀದಾ ಸಂಜೀವಣ್ಣನಲ್ಲಿಗೆ ಹೋಗಿ ಒಂದೊಂದು ಕ್ವಾಟ್ರ್ ಹಾಕಿ ಅವನ ಕರ್‌ಕಂಡ್ ಪೋಯಿತಾ. ನಾ ಅತ್ ತೇಳಿ ಒಪ್ಪಿಕಂಡ್ ಸೀದ ಅಲ್ಲಿಗೆ ಹೋದೊ. ಹೋದಂಗೆ ಮಣಿ ಎರಡ್ ಗ್ಲಾಸ್ ಏರಿಸಿತ್. ತಲೆ ಬಿಸಿಂದಾಗಿ ನಾನ್ ಒಂದು ಗ್ಲಾಸ್ ಹಾಕಿದೆ. ಮಣಿ ಮಾತಾಡಿ ಮಾತಾಡಿ ಕಂಡ್ ಮತ್ತೆ ಎರ್ಡ್ ಗ್ಲಾಸ್ ಹಾಕಿತ್. ಸಂಜೀವನು ಅರ್ಧ ಮನ್ಸ್‌ಲಿ ನಮ್ಮೊಟ್ಟಿಗೆ ಹೊರ್ಟತ್. ಹತ್ತ್ ಮಾರ್ ಹೋದಷ್ಟೆ ಕೈಸಾಲ್ ತ್ವಾಟ ಕರೇಲಿ ಮಣಿ ನಿತ್ತ್ ತಿರ್‍ಗಿ ನೋಡಿ ಸುಮ್ಮ ನಿರಿ ತೇಳ್ತ್ ನಾವು ಅಲ್ಲೇ ನಿತ್ತೋ ಕುರ್‌ಚ್‌ಲ್ ಗಿಡ ಅಲ್ಲಾಡ್ ತಿತ್ತ್. ಹಂದಿ ಇಲ್ಲೆ ಉಟ್ಟ್ಸತ ನನ್ನ ಮನ್ಸಿಗೆ ಆತ್ ಸ್ವಲ್ಪ ಸ್ವಲ್ಪ ಕಪ್ಪುನೂ ಕಾಂಬತಿತ್ತ್. ಮಣಿ ವಾಪಾಸ್ ತಿರ್‍ಗೀ ಬಂದ್ ಹಂದಿ ಅಲ್ಲೇ ಉಟ್ಟ್ ನೀವು ಹೊಡೇನಿ ಸಂಜೀವಣ್ಣ ತೇಳ್ತ್. ಸಂಜೀವ ನಂಗೆ ಯಾಕೆ ಅದರ ಮೋಟಿಕೆ ಆಕಿಲೆ ನೋಡೆ ಬುಟ್ಟೆ ತೇಳಿ ಕೋವಿ ತಗಂಡ್ ಗತ್ತ್‌ಲಿ ಹತ್ರ ಹತ್ರ ಹೋತು. ಢಂ! ತೇಳಿ ಶಬ್ದ ಕೇಳ್‌ಕಾಕನ ನಾವು ಗುಂಡಾದಲ್ಲಿಗೆ ಹೋದೊ. ಸಂಜೀವ ಇಂಗ್ ತಿಂದ ಮಂಗನಂಗೆ ತಲೆಮ್ಯಾಲೆ ಕೈಹೊತ್ತ್ ಕುದ್ದಿತ್ ನೋಡ್ರೆ ಎಂಥಾ ಹಂದಿನಂದಲ್ಲಾ ಅವನ ಹಂದಿನಾ ಅವನೆ ಮೋಚಿತ್ತ್ !

ಇನ್ನೆಂತಾ ಮಾಡ್ದು ಹಂದಿ ಬಿದ್ದುಟು ಯಾರ್‍ದಾ ದರೇನ್? ತಲೆ ಬಿಸಿ ಮಾಡಿ ಪ್ರಯೋಜನ ಇಲ್ಲೆ, ಹಂಗಿದ್ದರೂ ರಾಜಣ್ಣ ಮಾಸ ಕೊಟ್ಟನೆ ತಾ ಒಪ್ಪಿಕಂಡ್‌ವುಕೆ ಅಡ್ಜ್‌ಸ್ಟ್‌ಕಟ್ಟ್ ಮಾಡಿ ಕೊಡೋನೊ ತೇಳಿ ಮಣಿ ಹೇಳ್ತ್. ಅದ್ಕೆ ಸಂಜೀವನೂ ಒಪ್ಪಿತ್. ಅಷ್ಟ್ ಹೊತ್ತಿಗೆ ಮಾಸಕ್ಕೆ ತೇಳಿ ಜನಗ ಪುನಾರ್ ಬಂದೊ. ಎಲ್ಲವು ಸೇರಿ ಬ್ಯಾಗ ಬ್ಯಾಗ ಅಡ್ಜ್‌ಸ್ಟ್‌ಕಟ್ಟ್ ಮಾಡಿ ಏಕ್ ಕೆ.ಜಿ. ಕೇಳ್ದವುಕೆ ಮೂರ್ ಕೆ.ಜಿ. ಕೊಟ್ಟ್ ಸುದಾರ್ ಸಿದೊ. ವಾಪಸ್ ಮನೆಗೆ ಬಾಕನ ದಾರಿಲಿ ನಾನು ಮಣಿನ ಕೇಳ್ದೆ 'ದೇವರಕೊಲ್ಲಿ ಗುಳಿಗಂಗೆ ಹರ್ಕೆ ಹೊತ್ತ್‌ಕಂಡಕೆ ಹಂದಿ ಸಿಕ್ಕಿತಲ್ಲಾ ಮಣಿ...!?'

## ಲವ್ ಲೆಟರ್

ಹಿಂದೆ ಒಂದ್ ಕಾಲಲಿ ಒಂದ್
ಹೈದನ ಪ್ರೀತಿಸಿದ ಗ್ಯಾನ
ನೆನ್ನೆ ರಾತ್ರಿ ಉಕ್ಕಿ ಬಂದ್ ॥

ಹಗಲೆಲ್ಲಾ ನಿದ್ದೆ ಬುಟ್ಟ್
ಇರುಳೆದ್ದ್ ಕುದ್ದ್
ಒಂದು ಪ್ರೇಮಗೀತೆ ಬರ್ದೆ ॥

ಪ್ರೇಮಗೀತೆ ಬ್ಯಾಡತೇಳಿ
ವಿಷಯ ನೂರು ಬರ್ದ್‌ನೆಂತೇಳಿ
ಅದೆಲ್ಲಾ ಲಾಯ್ಕಿಲ್ಲೆ ತೇಳಿ ॥

ಹರ್ದ್ ಹರ್ದ್ ಚೂರ್ ಮಾಡಿ
ಕಿಟಕಿಯತ್ತಾ ಬಿಸಾಕಿ
ಗಮ್ಮತ್ತ್ ನಿದ್ರೆ ಮಾಡ್ದೆ ॥

ಯಾಕೋ ಅಮ್ಮ ಬೆಳಿಗ್ಗೆ
ಎದ್ದ್ ಇದೆಂತಾ ಕಾಗದ ಚೂರ್‌ಂತೇಳಿ
ನನ್ನನ ನೋಡಿ ಕೇಳ್ತ್ ॥

ಆಗ ನಾನ್ ನೆಗಾಡಿಕಂಡ್
ಲವ್‌ಲೆಟರ್ ತೇಳ್ದೆ, ಅಮ್ಮಂಗೇನ್ ಗೊತ್ತ್
ಇಂಗ್ಲೀಷ್ ಗೊತ್ತಿಲ್ಲದೆ ಹಾಂ ! ತೇಳ್ತ್ ॥

—ಕೆ. ಈ. ಧನು, ದೆಹಲಿ.

## ವೀರಪ್ಪ

ಕಾಡುಗಳ್ಳ ವೀರಪ್ಪ
ನೀ ಎಲ್ಲಿ ಒಳ ಹೇಳಪ್ಪ
ನಿನ್ನ ನಾ ಹಿಡ್ದ್ ಕೊಟ್ಟರೆ
ನಂಗೆ ಸಿಕ್ಕಿದೆ ನಲವತ್ತ್ ಲಕ್ಷ
ದಿನಾ ತಿಂದನೆ ತರತರ ಭಕ್ಷ್ಯ.

—ಬಾಡನ ಶಕುಂತಲ ಸುಬ್ಬಯ್ಯ, ಮೈಸೂರು

## ಕ್ಯೂ ನಿತ್ತ್‌ಕಂಡಿದ್ದೆ

ಅಣ್ಣೆ : ಏನ್ರ ಚೋಮುಣಿ ನಾಲ್ಕೈದ್ ದಿನ ಪತ್ತೆ ಇಲ್ಲೆ. ಚಾಪೆಲಿ ನಾನ್ ಯಾಗೋಳು ಕಾಯುದು ನಿಂಗೆ

ಚೋಮುಣಿ : ನಾನ್ ನನ್ನ ಮಜಂಗೆ LKGಗೆ ಸೀಟ್ ಸಿಕ್ಕಿರೆ ತಿರುಪತಿಗೆ ಹೋಗಿ ಮುಡಿ ಕೊಟ್ಟನೆಂತ ತಿರುಪತಿಗೆ ಹೋಗಿ ಕ್ಯೂ ನಿತ್ತ್‌ಕಂಡಿದ್ದೆ, ಅದ್ಕೆ ಬಾತ್ಲೆ.

—ಪಾಣತ್ತಲೆ ಎಸ್. ರಾಜ, ಬೆಂಗಳೂರು.

ಕೊಡಗು ಸಂಗಾತಿ ಪಾಕ್ಷಿಕ ಪತ್ರಿಕೆಯು ತನ್ನ 3ನೇ ವರ್ಷಕ್ಕೆ ಪಾದಾರ್ಪಣೆಗೈಯ್ಯುತ್ತಿರುವ ಈ ಸಂದರ್ಭದಲ್ಲಿ ಶುಭ ಕೋರುವೆವು. ಪತ್ರಿಕೆಯು ಎಂದೆಂದಿಗೂ ತನ್ನ ಪ್ರಗತಿಯನ್ನು ಸಾಧಿಸಿ ಜನಸೇವೆ ಮಾಡಲೆಂದು ಹಾರೈಸುವೆವು.

**ಪ್ರೊ|| ಪೂಜಾರಿ ಅಪ್ಪಯ್ಯ ಮೊಣ್ಣಪ್ಪ**
[ನೋಟರಿ ಮತ್ತು ವಕೀಲರು]
**ಶ್ರೀಮತಿ ಪೂಜಾರಿ ಭಾಗೀರಥಿ ಮೊಣ್ಣಪ್ಪ** MA. ನಿವೃತ್ತ
[ಕೇಂದ್ರಿಯ ಕಾರ್ಮಿಕ ಶಿಕ್ಷಣ ನಿಗಮ, ರೀಜನಲ್ ಡೈರೆಕ್ಟರ್] ಬೆಂಗಳೂರು.

---

ಬಡವರಲ್ಲಿ ಬಡವ ಆಗಿ ನಮ್ಮೆಲ್ಲರ ಕಷ್ಟ ಸುಖಲಿ ಭಾಗಿ ಆಗ್ತಾ,
ನಮ್ಮವುಕೆ ಪ್ರಜ್ಞೆ ಮೂಡಿಸ್ತಾ, ಸಜ್ಜಾಗಿ ನಿರಂತರ ಗೌಡ ಜನಕ್ಕೆ
ಹೋರಾಟ ಮಾಡ್ತಾ ಹಂಗೇನೆ 3ನೇ ವರ್ಷಕ್ಕೆ ಕಾಲಿಟ್ಟ ನಮ್ಮ ನೆಚ್ಚಿನ
ಕೊಡಗು ಸಂಗಾತಿಗೆ ನಮ್ಮ ಶುಭ ಹಾರೈಕೆಗ.

**ಶ್ರೀ ಅಕ್ಕಾರಿ ಬೋಜಪ್ಪ ಸುಬ್ಬಯ್ಯ (ಚಾಮಿ)**
**ಶ್ರೀಮತಿ ಶೋಭಾವತಿ ಸುಬ್ಬಯ್ಯ**
**ಮಂಜ್ಜು ಯತೀನ್ ಸುಬ್ಬಯ್ಯ**
ಹಾಕತ್ತೂರು ಗ್ರಾಮ ಮತ್ತೆ ಅಂಚೆ, ಮಡಿಕೇರಿ-571 201

---

## — ಶುಭ ವಿವಾಹ —

ಭಾಗಮಂಡಲನಾಡು ಚೇರಂಗಾಲ ಗ್ರಾಮದ ಪೆರುಬಾಯಿ ಕೃಷ್ಣಪ್ಪನವರ ಮಗ ಮುರಳೀಧರ್ ಮತ್ತು ಬೆಂಗಳೂರು ನಿವಾಸಿ ಕುಂಚಡ್ಕ ಉಲ್ಲಾಸ, ಡಿ.ವೈ.ಎಸ್.ಪಿ. ಇವರ ಮಗಳು ರಮ್ಯ ಇವರ ವಿವಾಹವು ದಿನಾಂಕ 12-3-99 ರಂದು ಬೆಂಗಳೂರಿನ ಕೊಡವ ಸಮಾಜದಲ್ಲಿ ವಿಜೃಂಭಣೆಯಿಂದ ನಡೆಯಿತು.

---

## - ಸೂಚನೆ -

ಮಾನ್ಯ ಚಂದದಾರರು ಇನ್ನು ಮುಂದೆ ಮನಿಆರ್ಡರ್ ಮೂಲಕ ಹಣ ಕಳುಹಿಸುವಾಗ ಫಾರಂನ ಕೆಳಗಿನ ಭಾಗದ ಸುದ್ದಿ ತಿಳಿಸುವ ಖಾಲಿ ಜಾಗದಲ್ಲಿ ತಮ್ಮ ಪೂರ್ಣ ವಿಳಾಸವನ್ನು ತಪ್ಪದೆ ಬರೆಯಬೇಕಾಗಿ ವಿನಂತಿ ಹಾಗೂ ಮನೆ ಹೆಸರು, ತಂದೆ ಹೆಸರು ಸಹ ಬರೆಯುವಂತೆ ಸೂಚನೆ. —ಸಂ

---

## ನಿಧನ

ಕುಶಾಲನಗರದ ನಿವಾಸಿ ಜನಾಂಗದ ಹಿತೈಷಿ ಕೊಡಗನ ರಮೇಶ್‌ರವರ ಮಾತೋಶ್ರೀ ದೇವಕ್ಕಿಯವರು ತಮ್ಮ 82ನೇ ವಯಸ್ಸಿನಲ್ಲಿ ದಿನಾಂಕ 2-3-99 ರಂದು ಕುಶಾಲನಗರದ ತಮ್ಮ ಸ್ವಗೃಹದಲ್ಲಿ ನಿಧನರಾದರೆಂದು ತಿಳಿದುಬಂದಿದೆ.

K R N N-240 10-01-96 TCI Kar. 09592

  

## ವೀರಾಜಪೇಟೆ ತಾಲ್ಲೋಕ್ ಗೌಡ ಸಮಾಜದ ಪರವಾಗಿ
## ಜನಾಂಗದ ಬಂಧುಗಳಲ್ಲಿ ಸವಿನಯ ಪ್ರಾರ್ಥನೆ

ವೀರಾಜಪೇಟೆ ತಾಲ್ಲೋಕು ಗೌಡ ಜನಾಂಗದ ಸಂಘಟನೆ ಮಾಡಕುತ್ತೇಳಿ, ಕೆಲವು ಜನಾಂಗಾಭಿಮಾನಿಗ ಮುಂದೆ ಬಂದ್ **20-12-1998**ರಂದ್ ವೀರಾಜಪೇಟೆ ಕರ್ನಾಟಕ ಸಂಘದ ಸಭೆನ ಕರ್ದಿದ್ದೊ. ಆ ಸಭೆಗೆ ತಾಲ್ಲೋಕ್‌ನ ಗೌಡಾಭಿಮಾನಿಗ, ಕೊಡಗ್ ಗೌಡ ಅಕಾಡಮಿಯು ಸಮಿತಿ ಸದಸ್ಯರ್‌ಗ ಮತ್ತೆ ಹಲವು ಅಭಿಮಾನಿ ಯುವಕರ್‌ಗ ಬಂದಿದ್ದೊ. ಆ ಸಭೆಲಿ ವೀರಾಜಪೇಟೆ ತಾಲ್ಲೋಕ್ ಗೌಡ ಜನಾಂಗದ ಅಭಿವೃದ್ಧಿ ಬಗ್ಗೆ ಕೂಲಂಕುಶವಾಗಿ ಚರ್ಚೆ ನಡೆಸಿ ಕೊನೆಗೆ ತಾಲ್ಲೋಕ್‌ಲಿ ಗೌಡ ಜನಾಂಗದ ಸಂಘಟನೆಗೋಸ್ಕರ ಒಂದು ಸಮಿತಿ ಮಾಡಿಕೆ ಒಮ್ಮತದ ತೀರ್ಮಾನಕ್ಕೆ ಬಂದ್ ಬಂದ್ದವೆಲ್ಲ ಅಧ್ಯಕ್ಷರಾಗಿ ಶ್ರೀ ಪಡಿಕಲ್ ಮಾದಪ್ಪನವರನ ನೇಮಿಸಿ ಬಂದ್ ಸಮಿತಿನ ರಚನೆ ಮಾಡಿದ್ದೊ. ಹಂಗೇನೆ **17-1-99** ರಂದ್ ಕಾರ್ಯಕಾರಿ ಸಮಿತಿಗ ಸಭೆ ಸೇರಿ ತಾಲ್ಲೋಕ್ ಮತ್ತೆ ತಾಲ್ಲೋಕಿಗೆ ಹೊಂದಿಕಂಡ್ ಇರುವ ಊರ್‌ಗಳ್‌ಂದ ಪ್ರತಿ ಒಬ್ಬ ಗೌಡಜನಾಂಗದವರನ ಸದಸ್ಯರಾಗಿ ಮಾಡಿಕಂಡ್, ಗೌಡ ಸಮಾಜಕ್ಕೆ ಒಂದ್ ಜಾಗ ನೋಡಿ ಕಟ್ಟಡನ ನಿಮ್ಮೆಲ್ಲರ ಸಹಕಾರಂದ ನಿರ್ಮಿಸಿಕೆ ಹೊರಟಿಕ್ಕೋ. ಅಲ್ಲದೆ ಪ್ರತಿ ಗ್ರಾಮಂದ ಇಬ್ಬಿಬ್ಬರ್ ಕಮಿಟಿ ಸದಸ್ಯರ್‌ನ ತಕಣಿಕೆ ತೀರ್ಮಾನನ ಮಾಡ್‌ದೊ. ಹಾಗಾಗಿ ನಾವ್ ಸಮಿತಿ ಸದಸ್ಯರ್‌ಗ ನಿಮ್ಮ ಸಹಕಾರ ಮತ್ತೆ ಸದಸ್ಯತನ ಕೇಳಿಕ್ಕಾಗಿ ಸದ್ಯಲಿ ನಿಮ್ಮ ಗ್ರಾಮಗಳಿಗೆ ಭೇಟಿಕೊಟ್ಟವೆ. ತಾವು ಜನಾಂಗದ ಅಭಿವೃದ್ಧಿ ಗೋಸ್ಕರ ಎಲ್ಲವು ಸಂಪೂರ್ಣ ಸಹಕಾರ ಕೊಡಕುತ್ತೇಳಿ ನಿಮ್ಮಲ್ಲಿ ವಿನಂತಿಸಿಕಂಡವೆ.

**ಶ್ರೀ ಪಡಿಕಲ್ ಮಾದಪ್ಪ**
ಅಧ್ಯಕ್ಷರ್

**ಶ್ರೀ ಕೋರಿಯಾರ್ ಆನಂದ**
ಉಪಾಧ್ಯಕ್ಷರ್

**ಶ್ರೀ ಮೂಡಗದ್ದೆ ರಾಮಕೃಷ್ಣ (ವಸಂತ)**
ಕಾರ್ಯದರ್ಶಿ

**ಶ್ರೀ ಪೊಕ್ಕುಳಂಡ್ರ ಸುಬ್ಬಯ್ಯ**
ಖಜಾಂಚಿ

**ಶ್ರೀ ಬಾರಿಕೆ ಮನೋಜ್‌ಕುಮಾರ್**
ಸಂಘಟನಾ ಕಾರ್ಯದರ್ಶಿ

**ಹಾಗೂ ಸಮಾಜದ ಸಮಿತಿ ಸದಸ್ಯರ್‌ಗ**



Kodagu Sangathi Kannada fortnightly Edited, Published, Printed & Owned by Pattada P Sheelamani, No. 35, Savitha Nilaya, I Cross, 4th Block, Jayalaxmipuram, Mysore-570 012. And Printed at Ashirwad Printers, 180/A 6th Main, Vinayakanagar, Mysore-570 012. Tele : Office : 0821 / 516771.